ಅಂಬಿಕಾತನಯದತ್ತರ

# ಮುಕ್ತ ಕಂಠ



ಸಂಪಾದಕರು:

ಡಾ॥ ವಾಮನ ಬೇಂದ್ರೆ



ಅಂಬಿಕಾತನಯದತ್ತರ

# ಮುಕ್ತಕಂಠ

''ಅರಳು ಮರಳು'' - ಪಂಚಗುಚ್ಛದಲ್ಲಿಯ ಕವನ ಸಂಕಲನ

ಅಂಬಿಕಾತನಯದತ್ತರ ಕಾವ್ಯ
(ವರಕವಿ ಡಾ|| ದ. ರಾ. ಬೇಂದ್ರೆ)

# ಮುಕ್ತಕಂಠ

''ಅರಳು ಮರಳು'' - ಪಂಚಗುಚ್ಛದಲ್ಲಿಯ ಕವನ ಸಂಕಲನ

ಸಂಪಾದಕರು :
ಡಾ|| ವಾಮನ ಬೇಂದ್ರೆ,
ಸಹ-ನಿರ್ದೇಶಕರು,
ಬೇಂದ್ರೆ ಸಂಶೋಧನ ಸಂಸ್ಥೆ



ಪ್ರಕಾಶಕರು :
ಡಾ|| ಕೆ. ಎಸ್. ಶರ್ಮಾ,
ನಿರ್ದೇಶಕರು, ಬೇಂದ್ರೆ ಸಂಶೋಧನ ಸಂಸ್ಥೆ
ಶ್ರೀಮಾತಾ ಪ್ರಕಾಶನ,
ಅಂಬಿಕಾತನಯದತ್ತ ವೇದಿಕೆ
''ವಿಶ್ವಶ್ರಮ ಚೇತನ'', ಗೋಕುಲ ರಸ್ತೆ ಹುಬ್ಬಳ್ಳಿ - ೫೮೦ ೦೩೦.
ಕರ್ನಾಟಕ ರಾಜ್ಯ

ಮುಕ್ತಕಂಠ (ಕವನ ಸಂಕಲನ)

★

ಕವಿ : 'ಅಂಬಿಕಾತನಯದತ್ತ' (ವರಕವಿ ಡಾ|| ದ. ರಾ. ಬೇಂದ್ರೆ)

★

ಸಂಪಾದಕರು : ಡಾ|| ವಾಮನ ಬೇಂದ್ರೆ,
ಸಹ ನಿರ್ದೇಶಕರು, ಬೇಂದ್ರೆ ಸಂಶೋಧನ ಸಂಸ್ಥೆ ಹುಬ್ಬಳ್ಳಿ

★

ಪ್ರಕಾಶಕರು :
ಡಾ|| ಕೆ. ಎಸ್. ಶರ್ಮಾ, ನಿರ್ದೇಶಕರು, ಬೇಂದ್ರೆ ಸಂಶೋಧನ ಸಂಸ್ಥೆ ಹುಬ್ಬಳ್ಳಿ
ಶ್ರೀಮಾತಾ ಪ್ರಕಾಶನ,
ಅಂಬಿಕಾತನಯದತ್ತ ವೇದಿಕೆ, 'ವಿಶ್ವಶ್ರಮ ಚೇತನ', ಗೋಕುಲ ರಸ್ತೆ ಹುಬ್ಬಳ್ಳಿ - 580 030.

★



★

ಬೆಲೆ : ರೂ.60-00

★

ಮುದ್ರಣ : 18-5-2007

★

ಆಕಾರ : 1/8 ಡೆಮ್ಮಿ

★

ಕಲೆ : ಶ್ರೀ ಸುರೇಶ ಕುಲಕರ್ಣಿ, ಧಾರವಾಡ

★

ಹೊರಹೊದಿಕೆ ವಿನ್ಯಾಸ : ಶ್ರೀ ರವೀಂದ್ರ, ಶಿರೋಳಕರ, ಧಾರವಾಡ

★

ಪುಟ ವಿನ್ಯಾಸ/ಡಿಟಿಪಿ : ಶ್ರೀ ಈರಣ್ಣ ನೂಲ್ವಿ, ಡಾ|| ಕೆ. ಎಸ್. ಶರ್ಮಾ ಐ.ಟಿ.ಸಿ., ಹುಬ್ಬಳ್ಳಿ

★

ಮುದ್ರಕರು :
ಶರ್ಮಾ ಮುದ್ರಕರು,
4, ಪತ್ರಕರ್ತರ ಕಾಲನಿ, ಹುಬ್ಬಳ್ಳಿ - 580 032.

★

ಕೃತಿಗಳಿಗಾಗಿ ಬರೆಯಿರಿ :
ಶ್ರೀಮಾತಾ ಪ್ರಕಾಶನ,
'ವಿಶ್ವಶ್ರಮ ಚೇತನ', ಗೋಕುಲ ರಸ್ತೆ ಹುಬ್ಬಳ್ಳಿ - 580 030. ದೂರವಾಣಿ : (0836) 2330466.

ರವೀಂದ್ರ ಪುಸ್ತಕಾಲಯ,
ಚಾಮರಾಜಪೇಟೆ, ಸಾಗರ - 577 401, ಶಿವಮೊಗ್ಗ ಜಿಲ್ಲೆ ದೂರವಾಣಿ : 08183-228616 (ಕ).

# ಸಾವಿರದ ನಮನ

ಹೃದಯಾಂತರಾಳದಿಂದ ಅರಳಿದ ಕವನ ಕುಸುಮಗಳನ್ನು

ಕನ್ನಡ ಸರಸ್ವತಿಗೆ ಅರ್ಪಿಸುವ ಮೂಲಕ,

ಆರದ ಆರತಿಯನ್ನು ಸದಾಕಾಲ ಬೆಳಗುತ್ತ

ವಿಶ್ವಮಾನವ ವಿಕಾಸಕ್ಕೆ ನವಬೆಳಗನ್ನು ಬಿಂಬಿಸುತ್ತಾ ಸಾಗಿರುವ

ಬೆಳಕಿನ ಮಹಾಪಥಿಕ, ಋಷಿಕವಿ, ವಿಶ್ವಕವಿ, ಅಮರಕವಿ

ಔದುಂಬರದತ್ತ ಚೈತನ್ಯ ಕ್ಕೆ

(ದ. ರಾ. ಬೇಂದ್ರೆ-ಅಂಬಿಕಾತನಯದತ್ತ)

**ನಮ್ಮ ಸಾವಿರದ ನಮನಗಳು.**

ವಾಮನ
(ಸಂಪಾದಕ)

ಕುವಲಯಶ್ಯಾಮ
(ಪ್ರಕಾಶಕ)

# ಪರಿವಿಡಿ


i) ಮುನ್ನುಡಿ - ವರಕವಿ ಡಾ|| ದ. ರಾ. ಬೇಂದ್ರೆ.......ix

ii) ಸಂಪಾದಕರ ಭೂಮಿಕೆ - ಡಾ|| ವಾಮನ ಬೇಂದ್ರೆ..................x

iii) ಕಂಠ ಮತ್ತೆ ಮುಕ್ತವಾಗುವ ಮುನ್ನ - ಡಾ|| ಕೆ. ಎಸ್. ಶರ್ಮಾ..........xxx

| | | |
|---|---|---|
| ೧. | ರಮಣ ಹೃದಯ | ೩ |
| ೨. | ಅಮೃತಾನುಭವ | ೧೨ |
| ೩. | ಆನಂದಲಹರಿ | ೧೮ |
| ೪. | ಓಮರ | ೨೩ |
| ೫. | ಬೆಳಗುಜಾವ | ೨೭ |
| ೬. | ಏಳಣ್ಣ | ೨೮ |
| ೭. | ಈಶ | ೨೯ |
| ೮. | ಕಾಳಿದಾಸ | ೩೦ |
| ೯. | ಸುಮ್ಮನಿರು ಓ ಮಾತೆ | ೩೧ |
| ೧೦. | ಸಾಕ್ಷಿ | ೩೨ |
| ೧೧. | ಜೀವದ ತತ್ತಿ | ೩೩ |
| ೧೨. | ವಿಶ್ವ ಒಂದು ಅಶ್ವ | ೩೪ |
| ೧೩. | ಪಂಚಮುಖ | ೩೫ |
| ೧೪. | ಕನ್ನಡದ ಕಮಳ | ೩೬ |
| ೧೫. | ಅಶೋಕವೃಕ್ಷ | ೩೭ |
| ೧೬. | ರಮ್ಯ-ಅಗಮ್ಯ | ೩೮ |
| ೧೭. | ಬೆಳ್ಳಿ ಮೂಡಲಗಾಲ | ೩೯ |
| ೧೮. | ಉಷೆ ತಂದಾಳಿಕೋ | ೪೦ |
| ೧೯. | ಆ ತನು | ೪೧ |
| ೨೦. | ಈ ಸಲದ ಸುಗ್ಗಿ | ೪೨ |

| | | |
|---|---|---|
| ೨೧. | ಹರಗೋಣ ಬಾ ಹೊಲ | ೪೩ |
| ೨೨. | ವೈತಂಡವಾದ | ೪೪ |
| ೨೩. | ಹೃದಯ ಪುಂಡರೀಕ | ೪೫ |
| ೨೪. | ಟೊಂಕದ ಮೇಲೆ ಕೈ ಇಟಗೊಂಡು | ೪೬ |
| ೨೫. | ಮೌನವಾರ | ೪೭ |
| ೨೬. | ಬಿಡಿಮುತ್ತು | ೫೦ |
| ೨೭. | ಮೋಡದ ಮಳಿಗೆಗೆ ರವಿ ಕಾದಿದ್ದ | ೫೪ |
| ೨೮. | ಹಾ! ಸರು | ೫೬ |
| ೨೯. | ಇದು ವಾರ ಪತ್ರಿಕೆ | ೫೭ |
| ೩೦. | ಆಟ | ೫೮ |
| ೩೧. | ನಿರ್ಮಕ್ಷಿಕ | ೫೯ |
| ೩೨. | ಈಚಲಮರದಮ್ಮ | ೬೦ |
| ೩೩. | ಜೀವಾಳದ ಆಶೆ | ೬೧ |
| ೩೪. | ಪ್ರಾಣಿಗಳು | ೬೨ |
| ೩೫. | ನನ್ನದಿರಲಿ ನಿನ್ನದಿರಲಿ | ೬೩ |
| ೩೬. | ಹೋರಾಡು ಹೋರಾಡು | ೬೪ |
| ೩೭. | ಮೂಷಿಕಾ ಸ್ವಯಂವರ | ೬೫ |
| ೩೮. | ಗೆಳತಿ | ೬೭ |
| ೩೯. | ಸೃಷ್ಟಿ | ೬೮ |
| ೪೦. | ಮುಕ್ತಕಂಠ | ೭೦ |
| ೪೧. | ಅಮೃತಾನುಭವ | ೭೧ |
| ೪೨. | ಆನಂದಲಹರಿಯಿಂದ | ೭೨ |

ಡಾ॥ ದ. ರಾ. ಬೇಂದ್ರೆಯವರ ಜೀವನ ಕಥೆಯ ಹಂದರ 1

ಡಾ॥ ದ. ರಾ. ಬೇಂದ್ರೆಯವರ ಸಾಹಿತ್ಯ ಕೊಡುಗೆ 5


ಮೊದಲನೆಯ ಆವೃತ್ತಿ : ೯-೭-೧೯೫೬

# ಮುನ್ನುಡಿ

''ಗಂಗಾವತರಣ''ವು ಪ್ರಕಾಶಿತವಾದ ಮೇಲೆ ಬೇರೆ ಯಾವ ಕವನ ಸಂಗ್ರಹಗಳು ಪ್ರಕಾಶಿತವಾಗಲು ಅನುಕೂಲವಾಗಲಿಲ್ಲ . ''ಗಂಗಾವತರಣ''ವೇ ತಡವಾಗಿ ಪ್ರಕಾಶಿತವಾಯಿತು. ''ಮೇಘದೂತ''ದ ಪ್ರಕಟನೆಯ ಹೊತ್ತಿಗೆ, ಸುಮಾರಾಗಿ ಪ್ರಕಾಶನಕ್ಕೆ ಸಿದ್ಧವಾದ ''ಗಂಗಾವತರಣ''ವು ೧೯೪೬ರಲ್ಲಿ ''ಹಾಡು-ಪಾಡು'' ಸಂಗ್ರಹದ ಅನಂತರ ಬಂದಿತು. ಹೀಗಾಗಿ ತಡೆದುನಿಂತ ಈ ಕಾರ್ಯ ಅರವತ್ತರ ಸಂಧಿಗೆ ಒಂದು ರಭಸದಿಂದ ಸಾಗುತ್ತಿದೆ. ೧೯೫೬ರ ಆದಿಯಲ್ಲಿ ''ಸೂರ್ಯಪಾನ'' ಬೆಳಕು ಕಂಡಿತು. ''ಹೃದಯ ಸಮುದ್ರ''ವು ಈಗಾಗಲೆ ಪ್ರಕಟವಾಗಿದೆ. ಇದೀಗ ''ಮುಕ್ತಕಂಠ''ವು ಪ್ರಕಟವಾಗಿದೆ. ಇನ್ನು ಬೇಗನೆ ''ಚೈತ್ಯಾಲಯ'' ಸಂಗ್ರಹ ಮುದ್ರಣದ ಮನೆಯಿಂದ ಹೊರಬಿದ್ದು, ಉಳಿದ ಕವನಗಳು ''ಜೀವ-ಲಹರಿ''ಯಲ್ಲಿ ಸಂಕಲಿತವಾದರೆ, ಹನ್ನೆರಡು ವರುಷಗಳ ಉಕ್ತಿಸಂಗ್ರಹ ಓದಿ ಸುಖಪಡಬಲ್ಲ ಸಹೃದಯರಿಗಾಗಿ ವ್ಯಕ್ತರೂಪಕ್ಕೆ ಬಂದಂತಾಯಿತು.

ಈ ಐದು ಕವನ ಸಂಗ್ರಹಗಳನ್ನು ''ಅರಳು-ಮರಳು'' ಎಂಬ ಒಂದೇ ಸಂಪುಟದಲ್ಲಿ ಒಟ್ಟುಗೊಳಿಸಿ, ಅದರೊಂದಿಗೆ ಅಲ್ಲಿರುವ ಭಾವ ಪ್ರಭಾವಗಳ ಅವಕಾಶ-ಪ್ರಕಾಶಗಳನ್ನು ಗುರುತಿಸಿ ಹೇಳುವ ಅಭಿಪ್ರಾಯ ಇಟ್ಟುಕೊಂಡಿದ್ದೇನೆ. ಈ ಸಂಗ್ರಹದಲ್ಲಿ ಬಂದ ಮೊದಲ ೨೫, ೩೦ ಪುಟಗಳ ಬರವಣಿಗೆಯಲ್ಲಿ ನಾಲ್ಕು ಬೇರೆ ಬಗೆಯ ಉದಾತ್ತವಾಣಿಗೆ ಕನ್ನಡಿ ಹಿಡಿಯಲಾಗಿದೆ. ಕನ್ನಡ ನುಡಿಯಲ್ಲಿ ಯಾವ ಸೌಂದರ್ಯಲಹರಿಗಳನ್ನು, ಅಮೃತಾನುಭವದ ನಿಮಿಷಗಳನ್ನು, ಹೃದಯದ ಅನಿರ್ವಾಚ್ಯ ಮೌನಮುಹೂರ್ತಗಳನ್ನು, 'ಮುಕ್ತಕಂಠ'ದಿಂದ ಬರುವ ಬಿಚ್ಚುನುಡಿಗಳನ್ನು, ವಿವಿಧ ನಯದಲ್ಲಿ ರೂಪಿಸಿದ್ದಾಗಿದೆ. ಉಳಿದ ಭಾಗದಲ್ಲಿ ಇದೇ ಬಗೆಯ ಹಲಕೆಲವು ಉಕ್ತಿಗಳೊಡನೆ ಸಾಂದರ್ಭಿಕವಾಗಿ ಬಂದ ವಿನೋದಪ್ರಾಯ ವಿಡಂಬನೋಕ್ತಿಗಳನ್ನೂ ಈ ಬಿಡಿಮುತ್ತುಗಳೊಡನೆ ಸೇರಿಸಲಾಗಿದೆ. ರಸಿಕರಿಗೆ ಇಲ್ಲಿಯೂ ಚರ್ವಣಕ್ಕೆ ನವರುಚಿಯ ಅನ್ನ ದೊರಕೀತೆಂದು ನನ್ನ ಅಪೇಕ್ಷೆ ಇದೆ.

''ಮುಕ್ತಕಂಠ'' ಬೇರೆ ಮಿತ್ರರು ಪ್ರಕಟಿಸುವವರಾಗಿದ್ದರು. ಅರ್ಧಮರ್ಧ ಮುದ್ರಣ ಪ್ರತಿಯನ್ನೂ ಸಿದ್ಧಗೊಳಿಸಿದ್ದರು. ಏಕಸಂಪುಟದ ಸೌಕರ್ಯಕ್ಕಾಗಿ, ಅವರು ಆ ಸಾಮಗ್ರಿಯನ್ನು ಬಳಸಿಕೊಳ್ಳಲು ಅನುಕೂಲ ಮಾಡಿಕೊಟ್ಟ ಸೌಜನ್ಯಕ್ಕಾಗಿ ನಾನು ಅವರಿಗೆ ಋಣಿಯಾಗಿದ್ದೇನೆ.

೯-೭-೧೯೫೬
ಸೊಲ್ಲಾಪುರ

- ಬೇಂದ್ರೆ ದತ್ತ ರಾಮ

# ಸಂಪಾದಕರ ಭೂಮಿಕೆ

'ಜೀವನ ಪವನದಂತೆ ಪಾವನ'ವಾಗಬೇಕು ಎಂಬ ಗುರಿಯ ಬೇಂದ್ರೆ, 'ಹೃದಯ ಆಕೂತಿ'ಯ ಮೂಲಕ ಉನ್ಮುಖರಾಗಿ ತನ್ನ ಇರುವಿಕೆಯನ್ನು ಅರ್ಥಮಾಡಿಕೊಂಡರು 'ಸೂರ್ಯಪಾನ'ದಲ್ಲಿ. ಆಗ ಅವರಿಗೆ ಅವರ ಹೃದಯದಲ್ಲಿ ಸೆಲೆ ಒಡೆದ ಸಿಹಿನೀರಿನ ಸಮುದ್ರದ ಅರಿವು ಆಯಿತು 'ಹೃದಯ ಸಮುದ್ರ'ದಲ್ಲಿ. ಈಗ ಈ ''ಮುಕ್ತಕಂಠ''ದಲ್ಲಿ ಪ್ರತಿಯೊಬ್ಬರ ಜೀವನ, ಹೊಳೆಯ ನೀರಿನಂತೆ ಒಂದು ಮಹಾತೀರ್ಥ. ಆದುದರಿಂದ ತಮ್ಮ ಜೀವನ ''ಆಪೋಜ್ಯೋತಿರಸೋಮೃತಂ'' ಎಂಬುದರ ಭಾವಾರ್ಥ ತಿಳಿದುಕೊಳ್ಳುವಲ್ಲಿ, ತಮ್ಮ ಪಾತ್ರದ ಹರಿವನ್ನು=ಆನಂದವನ್ನು ಪಡೆಯಬೇಕು ಎಂಬ ಅಭೀಪ್ಸೆ ಬೇಂದ್ರೆಯವರದಾಯಿತು. ಆಗ ಕವಿಯ ಕಿವಿಗಳಿಗೆ-

''ಗತಿಯು ತನ್ನ ಛಂದದಲ್ಲಿ
ಭಾವ ತನ್ನ ಬಂಧದಲ್ಲಿ''

ಹರಿಯುವುದರ ಶ್ರುತಿಯಾಗತೊಡಗಿತು. ಇದರ ಮೂಲಕ ಕಂಠ ಮುಕ್ತವಾಯಿತು.

''ಬಂದ ಮಾತ ಅಂದುಬಿಡುವೆ
ನಡೆವ ಮಾತ ನೋಡಿಬಿಡುವೆ''

ಎಂಬ ಅಚಲನಿಷ್ಠೆ ಬೇಂದ್ರೆಯವರಲ್ಲಿ ಸ್ಥಿರಗೊಂಡಿತು. ೧೯೨೮ರಲ್ಲಿ ಉಪನಿಷತ್ ರಹಸ್ಯ ಅಥವಾ ಭಾರತೀಯ ಅಧ್ಯಾತ್ಮಶಾಸ್ತ್ರ ಪೀಠಿಕೆಯು ಗುರುದೇವ ಡಾ|| ಆರ್. ಡಿ. ರಾನಡೆಯವರ ಇಂಗ್ಲಿಷ್ ಕೃತಿಯ ಕನ್ನಡ ಅನುವಾದವನ್ನು ರಂ. ರಾ. ದಿವಾಕರ ಹಾಗೂ ಶಂ. ಬಾ. ಜೋಶಿಯವರೊಂದಿಗೆ ಮಾಡಿದ್ದರು. ''ಮುಕ್ತಕಂಠ'' ಕವನಗಳ ನಿರ್ಮಿತಿಯ ಕಾಲಾವಧಿಯಲ್ಲಿ ಬೇಂದ್ರೆಯವರು ಭಾರತೀಯ ಅಧ್ಯಾತ್ಮಶಾಸ್ತ್ರವನ್ನು ಉಪನಿಷತ್ತುಗಳ ಬೆಳಕಿನಲ್ಲಿ ಹಾಗೂ ಆಧುನಿಕ ವಿಜ್ಞಾನದ ತಿಳುವಳಿಕೆಯಿಂದ ಅಭ್ಯಸಿಸಿದ ಅನೇಕ ಆಧಾರಗಳು ಇಲ್ಲಿವೆ. ಇವೆಲ್ಲವುಗಳನ್ನು ಆರು ವಿಭಾಗದಲ್ಲಿ ಗುರುತಿಸಬೇಕಾಗುತ್ತದೆ.

೧ನೆಯ ವಿಭಾಗದಲ್ಲಿ :

'ಆತ್ಮ'ಚಿಂತನದ ಕವನಗಳು. ಇಂಥ ೧೦ ಕವನಗಳು ಇಲ್ಲಿವೆ.

೨ನೆಯ ವಿಭಾಗದಲ್ಲಿ :

ಮನುಷ್ಯನ ದೇಹದ ಹೊರಗಿನ ಪರಿಸರದ ಅರ್ಥ ವಿವರಿಸಿ, ಬಹಿರಂಗ ಹಾಗೂ ಅಂತರಂಗದ ಸಂಬಂಧವನ್ನು ತರ್ಕಬದ್ಧವಾಗಿ ವರ್ಣಿಸಲಾಗಿದೆ. ಇಂಥ ೧೭ ಕವನಗಳು ಇಲ್ಲಿವೆ.

೩ನೆಯ ವಿಭಾಗದಲ್ಲಿ :

ಬೇಂದ್ರೆಯವರು ಸೃಷ್ಟಿಸಿದ ಗೆಳೆಯರ ಗುಂಪು, ಮೌನವಾರ ಆಚರಿಸಿ, ಪಡೆದ ಅನುಭವಗಳನ್ನು ವರ್ಣಿಸುತ್ತದೆ - ಇಂಥ ೪ ಕವನಗಳು ಇಲ್ಲಿವೆ.

೪ನೆಯ ವಿಭಾಗದಲ್ಲಿ :

ಬೇಂದ್ರೆಯವರ ವಿಶ್ವಚಿಂತನೆ, ಭಾರತ ಚಿಂತನೆ ಹಾಗೂ ಕರ್ನಾಟಕ ಚಿಂತನೆಯ ಕವನಗಳು - ಇಂಥ ೩ ಕವನಗಳು ಇಲ್ಲಿವೆ.

೫ನೆಯ ವಿಭಾಗದಲ್ಲಿ :

ಭಾವ ಗೀತಗಳಿವೆ. ಇವುಗಳ ಗೇಯತೆ ಆಕರ್ಷಕವಾಗಿದೆ - ಇಂಥ ೪ ಕವನಗಳು ಇಲ್ಲಿವೆ.

೬ನೆಯ ವಿಭಾಗದಲ್ಲಿ :

ವಾರಪತ್ರಿಕೆ, ನಿರ್ವ್ಯಕ್ತಿಕ, ಪ್ರಾಣಿ, ಪರಿಸರ ಮತ್ತು ಜೀವನದಲ್ಲಿ ಹೋರಾಟದ ಮಹತ್ವ ಕುರಿತು ಕವನಗಳಿವೆ - ಇಂಥ ೪ ಕವನಗಳು ಇಲ್ಲಿವೆ.

ಒಟ್ಟಿನಲ್ಲಿ ೧೦+೧೭+೪+೩+೪+೪=೪೨ ಕವನಗಳಿದ್ದು, 'ಮುಕ್ತಕಂಠ'ದ ಷಣ್ಮುಖ ದರ್ಶನ ಅಭ್ಯಸನೀಯ.

ಒಂದನೆಯ ವಿಭಾಗ - ಆತ್ಮಚಿಂತನ :

ದಿಲ್ಲಿಯಿಂದ ಆಳಿಕೆ. ಮಹಮ್ಮದೀಯರು ಅರಸರು. ಮಹಾರಾಷ್ಟ್ರದಲ್ಲಿ ಶಿವಾಜಿ ಮತ್ತು ಕರ್ನಾಟಕ ಕೃಷ್ಣದೇವರಾಯರು ಪ್ರಮುಖರಾಗಿದ್ದರು. ಶಿವಾಜಿಯ ಸಾಮ್ರಾಜ್ಯ ಸ್ಥಾಪನೆಯ ಪ್ರೇರಕಶಕ್ತಿ-ಸಂತ ರಾಮದಾಸರಾಗಿದ್ದಂತೆ, ವಿಜಯನಗರ ಸಾಮ್ರಾಜ್ಯಕ್ಕೆ ವಿದ್ಯಾರಣ್ಯರು ಹಕ್ಕಬುಕ್ಕರಿಗೆ ವಿವಿಧ ಪ್ರೇರಣೆಕೊಟ್ಟರು. ಕೃಷ್ಣದೇವರಾಯನ ಕಾಲಕ್ಕೆ ದಾಸಸಾಹಿತ್ಯವು ಜನಜೀವನವನ್ನು ಅಧ್ಯಾತ್ಮದ ತಳಹದಿಯ ಮೇಲೆ ರೂಪಿಸುತ್ತಿತ್ತು. ಮಹಾರಾಷ್ಟ್ರದಲ್ಲಿ ಅನೇಕ ಸತ್ಪುರುಷರು ಜನತೆಗೆ ಮಾರ್ಗದರ್ಶನ ಮಾಡುವಲ್ಲಿ; ಸಂತ ರಾಮದಾಸರ 'ದಾಸಬೋಧ' ಎಂಬ ಗ್ರಂಥ ಪ್ರಪಂಚ ಮತ್ತು ಪರಮಾರ್ಥಗಳ ಸೇತುವೆಯಾಗಿ ಕಾರ್ಯ ಮಾಡುವಲ್ಲಿ ಪ್ರಮುಖವಾಯಿತು.

ಅನಂತರದ ಕಾಲದಲ್ಲಿ ಪಾಶ್ಚಿಮಾತ್ಯರು ಭಾರತದೊಡನೆ ವ್ಯಾಪಾರಸಂಬಂಧ ಬೆಳೆಸುತ್ತ ಭಾರತದ ಸ್ವಾತಂತ್ರ್ಯವನ್ನೇ ಕಬಳಿಸಿಬಿಟ್ಟರು. ಸಂಸ್ಥಾನಗಳೆಲ್ಲ ಮುಳುಗಿದವು. ಗಜದಳ, ಅಶ್ವದಳ, ರಥದಳ ಮತ್ತು ಪದಾತಿಯಿಂದ ಕೂಡಿದ ಚತುರಂಗ ದಳಗಳು ಯುದ್ಧ ಮಾಡುತ್ತಿದ್ದವು. ಪ್ರತಿವರ್ಷವೂ ಸೀಮೋಲ್ಲಂಘನ ಮಾಡಿ, ರಾಜ್ಯ ವಿಸ್ತರಿಸುವ ಪರಂಪರೆಯಿತ್ತು. ಬ್ರಿಟಿಷರು ತುಬಾಕಿ, ಮದ್ದುಗುಂಡು, ತೋಫು ನಿರ್ಮಿಸಿ, ಭಾರತದ ಎಲ್ಲ

ಆಳರಸರನ್ನು ಗೆದ್ದುಬಿಟ್ಟರು. ''ನಿಧನಂ ಶ್ರೇಯಃ'' ಎಂಬುದು ಕ್ಷತ್ರಿಯರ ಧರ್ಮವಾಗಿತ್ತು. ಈ ಧರ್ಮಕ್ಕೆ ಬೆಂಬಲಿಸುವ ಜೈನ, ವೀರಶೈವ, ಬ್ರಾಹ್ಮಣ ಮಹಾಕಾವ್ಯಗಳ ಸೃಷ್ಟಿ ವಿಪುಲವಾಗಿತ್ತು. ರಾಜಾ ಪ್ರತ್ಯಕ್ಷ ದೇವರಾಗಿದ್ದನು. ಅವನಿಗೆ ಆಶೀರ್ವದಿಸುವ ಬ್ರಾಹ್ಮಣರು ರಾಜರಿಗೆ ಆಧೀನರು. ಕವಿಗಳು ರಾಜರನ್ನು ಹೊಗಳಿ ಮಹಾಕಾವ್ಯ ಬರೆದು, ರಾಜಾಶ್ರಯ ಪಡೆಯುವವರಾಗಿದ್ದರು. ಕವಿಗಳೆಲ್ಲರೂ ಕಲಿಗಳೂ ಆಗಿದ್ದರು. ವೈಶ್ಯರ ಹಣ, ರಾಜನ ಸಂಪತ್ತಿಗೆ ಪೂರಕ ಧೋರಣೆ ಸೃಷ್ಟಿಸುತ್ತಿತ್ತು. ಶೂದ್ರರು ಸೈನಿಕರಾಗಿ ಹೋರಾಡಿ ಮಡಿಯುತ್ತಿದ್ದರು. ನಾಕೂ ವರ್ಣದವರಿಗೆ ಮರಣವೇ ಮಹಾನವಮಿಯಾಗಿತ್ತು. ಹಿಂಸೆ ರೂಢಿಯಾಗಿತ್ತು. ಬುದ್ಧರ ಶಾಂತಿ, ಜೈನರ ಅಹಿಂಸೆ ಆದರ್ಶ ಬಯಕೆಗಳಾಗಿದ್ದರೂ, ಸಂಗ್ರಾಮ ಅಪರಿಹಾರ್ಯವಾಗಿತ್ತು. ಬ್ರಿಟಿಷರು ಹಿಂಸೆಯಿಂದಲೆ ಭಾರತ ಗೆದ್ದರು.

ಮಹಾತ್ಮಾ ಗಾಂಧಿಯವರು ಅಹಿಂಸೆಯಿಂದ ಭಾರತಕ್ಕೆ ಸ್ವಾತಂತ್ರ್ಯ ದೊರಕಿಸಿಕೊಡುವ ಧೋರಣೆ ಸೃಷ್ಟಿಸಿ, 'ಮಾಡು ಇಲ್ಲವೆ ಮಡಿ' ಎಂಬ ಚಳುವಳಿಗೆ ಸಕಲರನ್ನು ಸಿದ್ಧಗೊಳಿಸಿದರು. ಲೋಕಮಾನ್ಯ ಟಿಳಕರು ಗೀತಾ ರಹಸ್ಯ ವಿವೇಚಿಸುತ್ತ ಕರ್ಮಮಾರ್ಗವನ್ನು ಪ್ರತಿಪಾದಿಸಿದರು. ರವೀಂದ್ರರು-ಶಿಕ್ಷಣಕ್ಕೆ ಪ್ರಾಮುಖ್ಯತೆ ಕೊಟ್ಟರೆ ಶ್ರೀ ಅರವಿಂದ ಹಾಗೂ ಶ್ರೀಮಾತೆಯವರು 'ಪೂರ್ಣಯೋಗ' ಮಾರ್ಗದ ಪ್ರಚಾರಕರಾದರು.

ಈ ಕಾಲದಲ್ಲಿ ಮಹಾರಾಷ್ಟ್ರದ 'ಸಾತಾರಾ' ಸುತ್ತುಮುತ್ತು ರಾಮದಾಸರ ಮಹಂತರು 'ದಾಸಬೋಧ' ಗ್ರಂಥದ ಪಾರಾಯಣ ಹಾಗೂ ಶ್ರೀರಾಮಭಕ್ತಿಯ ಪ್ರಚಾರ ಮಾಡಿದರು. ಇದೇ ಕಾಲಕ್ಕೆ ವಿಜಾಪೂರದ ಸುತ್ತುಮುತ್ತಲಿನ ಸಂತರು ಶ್ರೀ ಕೃಷ್ಣಭಕ್ತಿಯ ಜೊತೆಜೊತೆ ಶ್ರೀ ರಾಮ ಭಕ್ತಿಯ ಪ್ರಚಾರಕರೂ ಆಗಿದ್ದರು. ಇದೇ ಬಗೆಯ ವೈವಿಧ್ಯ ಭಾರತದಲ್ಲಿ ಹಬ್ಬುತ್ತಿತ್ತು. ಕರ್ನಾಟಕದ ಶಿವಶರಣರು ಆತ್ಮಲಿಂಗ ಜಾಗೃತಪಡಿಸಿಕೊಂಡು ಅಂಗಸ್ಥಲಗಳನ್ನು ದಾಟಿ, ಲಿಂಗಸ್ಥಳಗಳಾದ - ಷಟ್‌ಚಕ್ರ ಜಾಗೃತಿ ಮಾಡಿಕೊಂಡು, ಆ ಲಿಂಗಗಳಲ್ಲಿ ಅಡಗಿರುವ- ಜ್ಞಾನಶಕ್ತಿ, ಕ್ರಿಯಾಶಕ್ತಿ ಹಾಗೂ ದೈವಿಕಶಕ್ತಿ ಸಂಪಾದಿಸುವ ಮಾರ್ಗದ ಪ್ರಚಾರಕರಾದರು. ಜೈನ ರಾಜರಿಗೂ, ಕವಿಗಳಿಗೂ 'ಅಧ್ಯಾತ್ಮವೇ ನಿಚಿತಪ್ರಯೋಜನ' ಎನಿಸುತ್ತಿತ್ತು.

ಒಟ್ಟಿನಲ್ಲಿ ಪ್ರತಿವ್ಯಕ್ತಿಯು 'ಆತ್ಮ'ಶಕ್ತಿ ಜಾಗೃತಪಡಿಸಿಕೊಳ್ಳಬೇಕು. ಅಂತರಂಗದ ಗುಣರಾಜ್ಯ (ರಜ ಮತ್ತು ತಮಗಳನ್ನು ಗೆದ್ದು, ಸಾತ್ತ್ವಿಕ ಶಕ್ತಿಯ ಪ್ರಭುಗಳಾಗುವುದು ಮತ್ತು ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರ ಎಂಬ ಆರು ವೈರಿಗಳನ್ನು ಗೆಲ್ಲುವುದು)ವನ್ನು ಗೆದ್ದು, ಅವುಗಳ ಮೇಲೆ 'ಆತ್ಮ'ನ ಆಧಿಪತ್ಯವನ್ನು ಸ್ಥಾಪಿಸುವುದಕ್ಕೆ ಪುರಾತನ ಋಷಿಗಳು ''ಸ್ವರಾಜ್ಯಸಿದ್ಧಿ'' ಎಂದು ಗುರುತಿಸಿದ್ದನ್ನು ಪಡೆಯಲೇಬೇಕು. ಒಳಗಿನದನ್ನು 'ಆತ್ಮ' ಗೆಲ್ಲದೆ ಹೊರಗಿನ (ಭಾರತದ ಸ್ವರಾಜ್ಯ) ಪಡೆಯಲಾರ. ಒಳಗಿನ ವಿಜಯದಿಂದ ಹೊರಗಿನ ಪರಿಸ್ಥಿತಿಯನ್ನು ಗೆಲ್ಲುವುದೇ 'ಸಾಮ್ರಾಜ್ಯ ಸಿದ್ಧಿ' ಎಂಬ ವಿಚಾರ ಪ್ರಣಾಲಿ ಜನರ ಮನಸ್ಸಿನಲ್ಲಿ ಬೇರುಹಿಡಿಯತೊಡಗಿತ್ತು. 'ಸ್ವರಾಜ್ಯಸಿದ್ಧಿ' ಮತ್ತು 'ಸಾಮ್ರಾಜ್ಯಸಿದ್ಧಿ' ಪ್ರಾಪ್ತವಾಗಬೇಕಾದರೆ- ಸ್ವರೂಪ ಸಾಕ್ಷಾತ್ಕಾರ=ಆತ್ಮ ಸಾಕ್ಷಾತ್ಕಾರ ಅವಶ್ಯ ಎಂಬುದು ಭಾರತೀಯ ಅಧ್ಯಾತ್ಮಶಾಸ್ತ್ರದ

ಮೂಲ. ಈ ವೈಚಾರಿಕ ತಾಕಲಾಟ ಭಾರತವನ್ನೇ ವ್ಯಾಪಿಸಿತ್ತು. ಹೀಗಿದ್ದೂ ಮಹಾತ್ಮಾ ಗಾಂಧಿಯವರ ಅಹಿಂಸಾ ಚಳುವಳಿ, ೧೯೪೭ರಲ್ಲಿ ಭಾರತಕ್ಕೆ ಸ್ವಾತಂತ್ರ್ಯ ದೊರಕಿಸಿ ಕೊಟ್ಟಿತು.

ಬೇಂದ್ರೆಯವರು ಭಾರತದ ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಿ ೧೯೩೨-೩೩ ಜೇಲು ಅನುಭವಿಸಿದ್ದರು. ಆದರೆ ಅವರು ಸೃಷ್ಟಿಸಿದ ''ಗೆಳೆಯರ ಗುಂಪಿ''ಗೆ ಐರಿಶ್ ಕವಿ ಜಾರ್ಜ್ ರಸೆಲ್-ಎ. ಈ. ''ನನ್ನ ಜೀವನ ಲೋಕದಲ್ಲಿ ಕಿರಣದಂತೆ ಸೇರಿದ'' ಗುರುಗಳು. ಅನಂತರದಲ್ಲಿ ಗುರುದೇವ ರವೀಂದ್ರನಾಥ ಟಾಗೋರ; ಅಧ್ಯಾತ್ಮ ಮಾರ್ಗದರ್ಶಕರಾದ ಶ್ರೀ ಅರವಿಂದ, ಶ್ರೀಮಾತೆ; ಅರೇಬಿಕ್ ಕವಿ-ಖಲೀಲ್ ಜಿಬ್ರಾನ್; ಸಂವಾದ ಚತುರ ಜೆ. ಕೃಷ್ಣಮೂರ್ತಿ ಮೊದಲಾದ ಅನೇಕರು ಗುರುಗಳಾಗಿ, ಪೂರ್ವದ ಕವಿಗಳಾಗಿ, ಚಿಂತಕರಾಗಿ, ಬೇಂದ್ರೆಯವರನ್ನು ಮುನ್ನಡಿಸಿದರು. ಈ ಪರಂಪರೆಯಲ್ಲಿ ಸಂಸ್ಕೃತ ಮಹಾಕವಿ ಕಾಳಿದಾಸ - ಕ್ರಿ. ಶ. ಪೂರ್ವ ೨ನೇ ಶತಮಾನದಷ್ಟು ಪೂರ್ವದವನು, ಮಹಾಕಾಳಿಮಾತೆಯ=ಶಕ್ತಿಯ ಉಪಾಸಕನು. ಅವನನ್ನು ಕುರಿತು 'ಮುಕ್ತಕಂಠ'ದಲ್ಲಿ ''ಕಾಳಿದಾಸ'' ಎಂಬ ಕವನವಿದೆ. ಅವನ ಕಾವ್ಯ ಹಾಗೂ ನಾಟಕಗಳ ಅಭ್ಯಾಸದಿಂದ-

''ನಲಿವು, ಉಲಿವು, ಬಲುಮೆ, ಚೆಲುವು, ಹೂ, ಹಕ್ಕಿ, ಹೆಣ್ಣು ಕಣ್ಣೆಂದು'' ತಿಳಿದುಕೊಂಡರು ಬೇಂದ್ರೆ. ಶಾಕುಂತಲ ನಾಟಕದ ನಾಯಿಕೆ ಶಕುಂತಲೆಯ ಪಾಲಕ ಮಾರ್ಗದರ್ಶಕ ಕಣ್ವ ಮಹರ್ಷಿಗಳ ಕಣ್ಣು (ದೃಷ್ಟಿ) ಬೇಂದ್ರೆಯವರ 'ಕನ್ನಡ ಕಣ್ಣಿನಲ್ಲಿ ಒಡಮೂಡಿತು' ಆಗ

''ಕತ್ತಲೆಯು ಬೆಳಕಿಗೆ ಬಾಗಿ
ಸಾವು ಸುಲಿಯಲು ಬಾಳೆ ತಿಳುಲು ಎನೆ ಸವಿಗೂಡಿ
ಮುದ್ದಾಟವೆನೆ ಬಂತು ಕಾಳಿದಾಸನ ಸುಗ್ಗಿ''

- ಕಾಳಿದಾಸ

ಆಯಿತು. ಕಾಳಿದಾಸನ 'ಸಂಸ್ಕೃತ ಮೇಘದೂತ'ವನ್ನು ಬೇಂದ್ರೆಯವರು 'ಕನ್ನಡ ಮೇಘದೂತ'ವಾಗಿ ಭಾವಾನುವಾದ ಮಾಡಿ, ಕನ್ನಡ ರಸಿಕರ ಮನವನ್ನು ಗೆದ್ದರು. ರಾಮದಾಸರ 'ದಾಸಬೋಧ'ವು ಬೇಂದ್ರೆಯವರ ಮತಿಗೆ ಸಾಣೆ ಹಿಡಿಸಿತ್ತು ಮತ್ತು ಕಾಳಿದಾಸನ ಸಂಸ್ಕಾರ ರಸಬೋಧಮಾಡಿಕೊಟ್ಟಿತ್ತು.

ಶ್ರೀಮತ್ ಶಂಕರಾಚಾರ್ಯರು ೭೮೦-೮೧೨ರ ಅವಧಿಯಲ್ಲಿ ಬಾಳಿ, ಅದ್ವೈತ ಮತವನ್ನು ಪ್ರಚಾರ ಪಡಿಸಿದರು. ಅದರ ದರ್ಶನ-ಸೌಂದರ್ಯ ಲಹರಿ=ಆನಂದ ಲಹರಿ-ಬೇಂದ್ರೆಯವರಿಗೆ ಅನೇಕ ವರ್ಷಗಳ ವರೆಗೆ ಪಾರಾಯಣ ಸ್ತೋತ್ರವಾಗಿತ್ತು; 'ಮುಕ್ತಕಂಠ'ದ ಕವನ ೩ ಮತ್ತು ೪೨ ಆ ಸ್ತೋತ್ರದ ಭಾವಾನುವಾದಗಳು. ೪೨ನೆಯ ಕವನ ಆನಂದಲಹರಿ-ಪ್ರಾರಂಭದ ನಾಕು ನುಡಿಗಳ ಭಾವಾನುವಾದ. ಇದರಲ್ಲಿ ಶಿವ, ಶಕ್ತಿ ಜಗತ್ತು ಮತ್ತು ಅವನು=ಪರಮಾತ್ಮನು ಎಂಬ ನಾಕರ ಚಿಂತನವಿದೆ. ಅದರಲ್ಲೂ ಶಕ್ತಿಯ

ಪಾರಮ್ಯವನ್ನು ವರ್ಣಿಸಲಾಗಿದೆ. ಶಕ್ತಿ-ಹರಿಗೆ-ಲಕ್ಷ್ಮಿಯಾಗಿ; ಹರಗೆ-ಪಾರ್ವತಿಯಾಗಿ, ಬ್ರಹ್ಮನಿಗೆ-ಸರಸ್ವತಿಯಾಗಿ ತಮ್ಮ ಶ್ರೇಷ್ಠತೆಯನ್ನು ಬಹಿರಂಗ ಪಡಿಸುತ್ತಾಳೆ. ಇಂಥ ಶಕ್ತಿಯ "ಅಡಿಯ ತಾವರೆಯ ತಳದ ಹುಡಿ" ಹಣೆಗೆ ಧರಿಸಿದ ಬ್ರಹ್ಮ-ಬ್ರಹ್ಮಾಂಡಗಳನ್ನು ಸೃಷ್ಟಿಸಿದನು. ಹರಿಯು ಶೇಷನಾಗಿ ತನ್ನ ಹೆಡೆಯ ಮೇಲೆ ಪೃಥ್ವಿಯನ್ನು ಧರಿಸಿದನು. ಹರನು ರುದ್ರನಾಗಿ ಸಂಹಾರಕನಾಗಿ ಪ್ರಳಯ ಮಾಡಿ ಅದರ ಬೂದಿಯನ್ನು ಬಳಿದುಕೊಂಡನು. ಅವರವರ ಕಾರ್ಯ ಅವರವರು ಮಾಡಿದರು.

ಅವಿದ್ಯೆ ಎಂಬುದು 'ಆತ್ಮ' ವಿದ್ಯೆ. ಇದು ಪ್ರತಿ ವ್ಯಕ್ತಿಯ ಅಂತರಂಗದ ಕತ್ತಲನ್ನು ಹೋಗಲಾಡಿಸುವ ಬೆಳಕಿನ ಒತ್ತು ದೀಪ! ಜಡದ ಒಡಲ ಚೈತನ್ಯದ ತೆನೆಯಲ್ಲಿ ಜೇನು ತುಂಬುವ ರಸಪ್ರವಾಹ! ಬಡತನವನ್ನು ಸಂಹರಿಸುವ ಚಿಂತಾಮಣಿಯ ಹಾರ! ಜನ್ಮ ಜಲಧಿಯ ಮೂಲಕ ಮುಳುಗುವ ಪೃಥ್ವಿಯನ್ನು ತನ್ನ ದವಡೆಗಳಿಂದ ಎತ್ತಿ ಸಂರಕ್ಷಿಸಿದ ವರಾಹಾ!

ಇಂಥ ಈ ಅವಿದ್ಯೆ=ಆತ್ಮವಿದ್ಯೆ=ಶಕ್ತಿ-ಚಂದ್ರನ ಮುಖದ ಬೆಳುದಿಂಗಳಾಗುತ್ತಾಳೆ. ಭಕ್ತರ ಕಣ್ಣೆಂಬ ಚಕೋರಗಳಿಗೆ ಬೆಳುದಿಂಗಳ ಕುಡಿಸಿ, ತೃಪ್ತಿ ಕೊಡುತ್ತಾಳೆ. ಇಂಥ ಈ ಚಂದ್ರನನ್ನು ಪ್ರತಿ ರಾತ್ರಿ ಬಿತ್ತರಿಸಿ-

"ಚಂದ್ರ ಬೆಳಕಿನಂಬಲಿಯ ರುಚಿಯು, ಹುಳಿಗಂಜಿ ನಂಜಿಕೊಳ್ಳುವಂತೆ" ಶಕ್ತಿ ಮಾಡುತ್ತಾಳೆ. (ಕವನ : ಆನಂದ ಲಹರಿ). ಇಂಥವಳ ಬಗ್ಗೆ ಪ್ರತಿಯೊಬ್ಬರೂ ಪೂಜ್ಯಭಾವ ತಾಳಬೇಕು. ಆಗ ಆ ಶಕ್ತಿ- "ಅಭಯ ವರದ ಕರಮುದ್ರೆ ಇಹುದು ಆ ಹಿಂಡು ದೈವಗಳಿಗೆ" ಎಂಬುದನ್ನು ಲಕ್ಷ್ಯಕ್ಕೆ ತಂದುಕೊಟ್ಟು, ತಮ್ಮ "ಚರಣದಿಂದಲೇ ಕಾರ್ಯವಾಗುತಿರೆ, ಕರಗಳೇಕೆ ಬೇಕು?" ಎಂದು ಪ್ರಶ್ನಿಸುತ್ತಾಳೆ. ಇವಳೇ ಗಿರಿಜೆಯಾಗಿ-ಶಿವನಪತ್ನಿಯಾಗಿ ತಾರಕ ಸಂಹಾರಕ್ಕೆ ಕಾರಣಳು. ಬ್ರಹ್ಮನಿಗೆ-ಸರಸ್ವತಿ ಹಾಗೂ ವಿಷ್ಣುವಿಗೆ-ಲಕ್ಷ್ಮಿ. "ಕಂಗಳಿಗೆ ಮಾಯೆಯಾಗಿ ಕವಿದು, "ಮೂರ ಮೀರಿ ನಾಲ್ಕನೆಯದೇನೋ" ಆಗಿ ಪರಿವರ್ತನೆ ಹೊಂದುತ್ತಾಳೆ. ಆಗ "ದಿನದಿನವು (ಪ್ರತಿಯೊಬ್ಬರ) ಉಸಿರನಾಳಲಿ ಕುಣಿಯೆ ಹೃದಯ ಸ್ಪಂದವು ಆಗಿ, ತಮ್ಮಡಿ (ಭಕ್ತನ) ಆನಂದ ಬೆಳೆಸುತ್ತಾಳೆ. ಸಾಧಕನ ಷಟ್‌ಚಕ್ರ ಜಾಗೃತ ಪಡಿಸಿ, ಏಳನೆಯ ಸಹಸ್ರದಲ ಕಮಲವನದಲ್ಲಿ ಮೆರೆಯುವಳು ನೂರು ರಸಗಳೀಂಟ"!

"ನೀನೆ ಶಿವನೊ, ಶಿವ ನೀನೋ ತಾಯಿ, ಸತಿಶಕ್ತಿ ನೀನು ಭಾಪು
ಮುಡಿಯಲ್ಲಿ ಚಂದ್ರ, ಹಣೆಯಲ್ಲಿ ಕಣ್ಣು, ಮೈಗೆಂಪು ಮಧುರ ರೂಪು
ಶಿವನ ಆಲಿಂಗಿಸುತ, ಶಿವನ ವ್ಯಾಪಿಸಿಬಿಟ್ಟೆ, ಶಿವನ ಅರ್ಧಾಂಗಿ ಎಂತೊ!
ಎಡದ ಮೈಯನು ತುಂಬಿ, ತಣಿವುಗೊಳ್ಳದೆ, ಏನೊ ಇಡಿ ಮೈಯ ತುಂಬಿ ನಿಂತೊ!"

- ಆನಂದ ಲಹರಿ

ಎಂದು ಆದಿಶಂಕರರು ಶಿವ-ಶಕ್ತಿಯ ಅದ್ವೈತ ತತ್ತ್ವವನ್ನು ಪ್ರತಿಪಾದಿಸುತ್ತಾರೆ.

"ನಡೆದುದೆ ಪ್ರದಕ್ಷಿಣವು, ಮಾಡಿದುದೆ ಮುದ್ರೆ, ಮಾತಾಡಿದುದೆ ನಿನ್ನ ನಾಮ
ಉಂಡಿದ್ದು ತಿಂದದ್ದು ನಿನಗೆ ಆಹುತಿ, ನೆಲಕೆ ಉರುಳೆ ದಂಡಪ್ರಣಾಮ
ಮುಟ್ಟಿದ್ದು, ಮೂಸಿದ್ದು, ನೋಡಿದ್ದು, ಕೇಳಿದ್ದು ಈ ಸಕಲ ಭೋಗದಿಂದ
ಮಾತೃಯೋಗವು ಪಡೆದು ಪೂಜೆಯೆನಿಸಲಿ ನಿನ್ನ ಕೃಪೆಯ ಕಾಟಾಕ್ಷದಿಂದ"

- ಆನಂದ ಲಹರಿ

ಎಂಬುದಾಗಿ ಸಾಧಕನು ಶಕ್ತಿಯ ಉಪಾಸನೆಯನ್ನು ಹೇಗೆ ಮಾಡಿ, ಕೃಪೆ ಪಡೆಯಬೇಕು ಎಂಬ ಸೂಚನೆ ಕೊಡಲಾಗಿದೆ. "ನಿನ್ನ ಅಡಿಯ ಮಣೆಯ ಮಾಡಿ ಮೆಟ್ಟೆ ತಾಯೆ ನನ್ನ" ಎಂದು ಸಮರ್ಪಣೆ ಮಾಡಿಕೊಳ್ಳುವುದು ಅವಶ್ಯ. ಹರಿ, ಇಂದ್ರ, ತಾರಕ, ಮೊದಲಾದವರೂ ತಾಯಿಯ ಬಾಯಿತಂಬುಲ ಬಯಸುವವರೆ! ಎಂದಮೇಲೆ ಸಾಮಾನ್ಯನು ಶಕ್ತಿಯ ಉಪಾಸನೆ ಮಾಡಬಾರದೇ ಎಂದು ಶಂಕರರು ಕೇಳಿದ್ದಕ್ಕೆ ಬೇಂದ್ರೆ ಕೊಟ್ಟ ಉತ್ತರವೇ ಅವರು ಮಾಡಿದ ಮಾತೃಪೂಜೆ! ತಾಯಿಯ ಉಪಾಸನೆ!

ಕ್ರಿ. ಶ. ೧೦೫೦ ರಿಂದ ೧೧೩೨ ರವರೆಗೆ ಬಾಳಿದ ಪರ್ಶಿಯಾದೇಶದ 'ಓಮರ್ ಖಯಾಮ್' ಬೇಂದ್ರೆಯವರಿಗೆ ಕವಿಯಾಗಿ ಮಾಡಿದ ಮಾರ್ಗದರ್ಶನ ಅವರು ಭಾವಾನುವಾದ ಮಾಡಿದ ಹಾಗೂ ಉಕ್ತಿಗಳ ಪ್ರೇರಣೆಯಿಂದ ರಚಿಸಿದ ಕವನಗಳು - ೪, ೫, ೬. ಓಮರ್- ಜ್ಯೋತಿಷ, ಬೀಜಗಣಿತ, ಕ್ಷೇತ್ರಗಣಿತ, ಭೌತಶಾಸ್ತ್ರ ಪಾರಂಗತ ಹಾಗೂ ದಾರ್ಶನಿಕ. ದಾರ್ಶನಿಕತೆಯ ಮೂಲಕ ಅವನು ರುಬಾಯಿ ಛಂದಸ್ಸಿನ ಚೌಪದಿ ಕಾವ್ಯ ರಚಿಸಿ-ಶೃಂಗಾರಿಕ ಕವಿಯಾಗಿ ಮುಂದಾದನು. ಅವನ ಶಾಸ್ತ್ರಜ್ಞಾನ ಮತ್ತು ವಿಜ್ಞಾನ ಜ್ಞಾನವನ್ನು ಕವಿತ್ವ ಮೀರಿಸಿತ್ತು.

ಪರ್ಶಿಯಾ ದೇಶ ಈಗಿನ ಇರಾಣ, ಅಫಗಾನಿಸ್ಥಾನದ ಪ್ರದೇಶ. ಇಲ್ಲಿಯ ಇರಾಣಿಯರು, ಭಾರತೀಯರು ತಾವು ಆರ್ಯರು ಎಂದು ಅಭಿಮಾನದಿಂದ ಹೇಳಿಕೊಳ್ಳುತ್ತಿದ್ದರು. ಇಬ್ಬರಿಗೂ ಅಶ್ವ ಹಾಗೂ ರಥ ಓಡಿಸುವಲ್ಲಿ ಪರಿಣತಿ ಇತ್ತು. ಅನಂತರ ಇರಾಣಿಗಳು ಗುಡ್ಡಗಾಡು ಪ್ರದೇಶ ಸೇರಿ, ಭಾರತೀಯರಿಗಿಂತ ಭಿನ್ನರಾದರು. ಪರ್ಶಿಯಾ ದೇಶದ ಸುರಸುಂದರಿಯರು ಹಾಗೂ ಪರ್ಶಿಯಾದಲ್ಲಿ ನಿರ್ಮಾಣಗೊಳ್ಳುವ ಮದ್ಯ ಪಾಶ್ಚಿಮಾತ್ಯ ಹಾಗೂ ಭಾರತೀಯ ಆಳರಸರಿಗೆ ಅತ್ಯಂತ ಪ್ರಿಯವಾಯಿತು. ಯೌವನ, ಅಧಿಕಾರ, ಸಂಪತ್ತು ಇದ್ದ ಎಲ್ಲ ಆಳರಸರು ಪರ್ಶಿಯಾ ಸುಂದರಿ ಹಾಗೂ ಮದ್ಯದ ಅತಿಮೋಹದಿಂದ ರಾಜ್ಯವನ್ನೇ ಕಳೆದುಕೊಂಡರು. ವಿಜಯನಗರ ಸಾಮ್ರಾಜ್ಯ, ಪೇಶ್ವೆಯವರ ಆಳಿಕೆ, ದಿಲ್ಲಿ ಅರಸುತನ, ಕರ್ನಾಟಕದ ಆಳರಸರು ಮುಳುಗಲು ಸ್ತ್ರೀ ಮತ್ತು ಮದ್ಯ ವ್ಯಸನ ಕಾರಣ. ರಾಜಕೀಯ ಇತಿಹಾಸದಲ್ಲಿ ಇದು ಇಂದಿಗೂ ಸತ್ಯ.

ದೇವರು ಕುಡಿಯವುದು ಸೋಮ=ಮಶ್ರುಂ ರಸ; ಅಸುರರು ಕುಡಿಯುವುದು ಅಪ್ಪಟ ಸೆರೆ. ಅಮೃತ ಪ್ರಾಪ್ತಿಗಾಗಿ ದೇವಾಸುರ ಸಂಗ್ರಾಮಗಳಾದವು. ರಾಜರು ಪರರ ರಾಜ್ಯಗಳ ಆಕ್ರಮಣಕ್ಕಾಗಿ ಸುಂದರ ಸ್ತ್ರೀಯರನ್ನು ಹಾಗೂ ಮದ್ಯವನ್ನು ಸಂಹಾರಶಸ್ತ್ರವಾಗಿ ಬಳಸಿದ್ದು ಹಳೆಯ ಇತಿಹಾಸ. ಧಾರ್ಮಿಕರಲ್ಲೂ, ಶಕ್ತಿಯ ಉಪಾಸಕರಿಗೆ ಸೆರೆ ಗ್ರಾಹ್ಯ. ಇದು

ಅನಾಚಾರ ಎಂದು ಕರೆಸಿಕೊಂಡರೂ, ಶಕ್ತಿಯ ಸಿದ್ಧಿಗೆ ಅವಶ್ಯ ಎಂದು ನಂಬಿದ್ದರು. ಶಕ್ತಿಯ ಗುಡಿಯ ಮಡಿ ಪೂಜಾರಿ. ಅವರು ತೀರ್ಥಗ್ರಹಿಸಿ ಕೇಳುತ್ತಾರೆ-

"............... ನರ್ತಕಿಗೆ ನುಡಿದ ನೊಂದು,
"ಎಲೆ ದುಷ್ಟೆ, ನಷ್ಟೆ, ನೀ ಬೇಟೆಯಾಡುವೆಯೆ ಪ್ರಾಯದವರೆನೆಂದು"

"ಹೌದು ಧಣಿಯೆ, ನಾ ಬಿಚ್ಚು ಮೊಗ್ಗೆ, ನನಗಿಲ್ಲ ಸೆರಗು ಮುಚ್ಚು
ತೆರೆದ ಪುಸ್ತಕವು ನನ್ನ ಬಾಳು, ನಿಮಗೇನು ಬೇರೆ ಹುಚ್ಚು!"

- ಓಮರ್

ಈ ನರ್ತಕಿ ಪ್ರಾಮಾಣಿಕಳಿದ್ದಷ್ಟೇ, ತರುಣ ಪಾನಾಸಕ್ತ ಪ್ರಾಯದ ಓಮರನು ಪ್ರಾಮಾಣಿಕ. ಅವನು ಸಾರುತ್ತಾನೆ-

"ಇಂದೆ ಬೆಳಗು ಅರಳಿರುವ ಹೂವು, ಅಕೊ ಸಂಜೆಹೊತ್ತಿಲ್ಲ
ರಾಮ-ರಾವಣರು, ಕೃಷ್ಣ-ಕಂಸರೂ ಕೊನೆಗೆ ಹೋದರಲ್ಲಾ"

ಅಂದಮೇಲೆ ಸುರಾಪಾನದಿಂದ ಮರಣ ಬಂದರೂ, ಓಮರನಿಗೆ ಗ್ರಾಹ್ಯ.

"ಪ್ರಾಯ ತುಂಬಿರಲು, ಪಾತ್ರೆ ತುಂಬಿರಲಿ ಬರಿದು ಭ್ರಾಂತಿ ಏಕೆ?
ಬಾಳಕಹಿಗೆ ಕಟುಮಧುರ ಸುರೆಯ ಸರಿಬೆರಕೆ ಬೇಕು, ಜೋಕೆ
ಸಖಿಯೆ, ಮದಿರಾಕ್ಷಿ ಸಾಕ್ಷಿ, ಇಲ್ಲೆನ್ನುವುದೆನ್ನ ಮನವೇ?
ಒಂದು ಮುಗಿದು, ಇನ್ನೊಂದು ಬರಲು, ಮತ್ತೊಂದು ತುಂಬು ಎನುವೆ"

"ಬದುಕಿರುವವರೆಗೆ ಈ ಘಟ ನಾನು, ಒಟ್ಟೊಂದೆ ಕೆಲಸಕಿಡುವೆ
ಯಾರದೇನು? ರಸ ಸೋಸಿ ನೋಡುವಾ ಪಾತ್ರೆ ಮಾಡಿ ಬಿಡುವೆ
ತಪ್ಪಿ ಒಡೆಯೆ, ಕುಂಬಾರರಣ್ಣ ಅದ ಮತ್ತೆ ಮಣ್ಣ ಮಾಡು
ಸುಟ್ಟು, ಕಟ್ಟು ಕುಡಿವವಗೆ ಮತ್ತೆ ಮೊಗೆ ಮಾಡಿ ಅದನೆ ನೀಡು"

"ಸಖಿ ಬಾರೆ, ತಾರೆ ರಸಚಷಕ, ನೀನು ಮಧುರವನು ತುಂಬು ತುಂಬು
ಪಡೆದದ್ದೆ ಉಂಟು, ಉಳಿದದ್ದು ಏನು? ಈ ವರ್ತಮಾನ ನಂಬು
ತನಿಸುಖದ ತುಟ್ಟತುದಿ ಮುಟ್ಟೆ ನೋಡು, ನರಜನ್ಮ ಸುಲಭವಲ್ಲ
ಓ ನಾಳೆ ನೋಡಿದವರಾರು? ಮುಂದಿನಾ ಕ್ಷಣವೆ ನೆಚ್ಚಿಗಿಲ್ಲ"

- ಓಮರ್

ಎಂಬಲ್ಲಿ ಓಮರನ ಚಾರ್ವಾಕ ದೃಷ್ಟಿಕೋನ ಸ್ಪಷ್ಟವಾಗಿದೆ. ಓಮರನ ಮೂಲ ಚೌಪದಿಗಳಲ್ಲಿ ಇಲ್ಲದ. ವಿಷಯ, ಕನ್ನಡ ಚೌಪದಿಗಳಾಗಿ ರೂಪತಾಳಿದ್ದು ಗಮನಾರ್ಹ ಮತ್ತು ಚಿಂತನೀಯ. ಆ ನುಡಿಗಳು ಹೀಗಿವೆ-

"ಪಂಪ ಹುಟ್ಟಿ ಭಾರತವ ಕಟ್ಟಿ ಹಿರಿಸಿದ್ಧಪದವ ಮುಟ್ಟಿ
ನಿರ್ಜರೆಯ ಪಡೆದ, ನೀ ಮಾತ್ರ ಅದನೆ ಓದುತ್ತ ಕುಳಿತುಬಿಟ್ಟೆ
ಈ ಪೊನ್ನ ರನ್ನ, ಜನ್ನ ರುಗಳಿರಲಿ; ತೀಡಿದರು ಅದನೆ, ಅದನೆ
ಯಾರಾರೋ ಎಂದು ರಸವಾರಿ ಹೋಗಿ ಪುಸ್ತಕವು ಆಯ್ತು ಬದನೆ"

"ಈಸಣ್ಣ ಹೌದು, ಬಸವಣ್ಣ ಹೌದು, ಮುಂದೇನು ಹೇಳು ಮಗನೇ!
ಆ ನಿನ್ನ ತಾಳದಲಿ ನೀನೆ ಕುಣಿದೆ ಸರಿ, ರಚಿಸಿದವನು ನಗನೇ?
ಒಳತೋಟಿಯಲ್ಲಿ ಹೋರಟೆಯು ಮಸಗಿ, ನವಧರ್ಮಮೇಘ ಹೊಮ್ಮಿ
ಮಿಂಚು ಹೊಡಕರಿಸಿ, ಗುಡುಗು ಬಂತು, ಬರಿ ವಚನವಲ್ಲ ತಮ್ಮ"

"..............................
ಕಲ್ಲಿನಲ್ಲಿ ಹೆಸರನ್ನು ಕೊರಿಸಿ, ಚಿರವೆಂದು ನಂಬಬೇಡ
ಜಯದ ಮದ್ದಿನಲಿ, ನಾಮ ಮೋಹದಲಿ ಭರತನಾದ ಮೂಢ
ಹೆಸರು ಇರಲಿ, ಮುಳುಗಿಹುದು ಎಲ್ಲೊ, ಆ ಹೆಸರ ಗುಡ್ಡ ಕೂಡ"

- ಓಮರ್

ಈ ಎಲ್ಲ ನುಡಿ, ಕರ್ನಾಟಕದ ಕವಿ ರತ್ನತ್ರಯರು, ದಾಸಶ್ರೇಷ್ಠ ಪುರಂದರದಾಸ, ಶರಣಶ್ರೇಷ್ಠ ಬಸವಣ್ಣ ಹಾಗೂ ಭರತ ಸಾಧಿಸಿದ್ದನ್ನು ವರ್ಣಿಸುತ್ತವೆ.

"ಗಾಂಧಿ ಇದ್ದ, ಮತ್ತಾರೊ ಬಿದ್ದ, ಹೊರಬರಲಿ ನಿನ್ನ ಬುದ್ಧಿ
ದಪ್ಪ ಅಕ್ಷರದ ವಾರ್ತೆ ಬೇಡ ಬರಿ ವರ್ತಮಾನ ಸುದ್ದಿ
ಮಣ್ಣು ಹತ್ತದಿರಲೆಂದು ಮೀಸೆಯನು ಇಳಿಸಿಬಿಟ್ಟೆ ನೀನು
ಮುಖಕೆ ಮಸಿಯು ಹತ್ತೀತು, ಇನ್ನು ಮುಂದದರಗತಿಯು ಏನು?"

- ಓಮರ್

ಎಂದು ಪ್ರಶ್ನಿಸಿ, ಓಮರನ ಸ್ವಭಾವದಲ್ಲಿ ಪರಿವರ್ತನೆಯಾಗಲಿ, ಅವನ ಕೀರ್ತಿ ಉಳಿಯಲಿ, ಬೆಳೆಯಲಿ ಎಂದು ಬೇಂದ್ರೆ ಅಪೇಕ್ಷಿಸಿದ್ದರು.

"ಜಗದ್ರಂಗದಲಿ ಯಾವ ಪಾತ್ರ ಕನ್ನಡವು ವಹಿಸಬಹುದು" ಎಂಬ ಬೇಂದ್ರೆ ಪ್ರಶ್ನೆ ಅವರು ಯಾವಾಗಲೂ ಕರ್ನಾಟಕದ-ಕನ್ನಡದ ಕೀರ್ತಿಯ ಅಭಿವೃದ್ಧಿಯನ್ನೇ ಬಯಸುತ್ತಿದ್ದರು ಎಂಬುದನ್ನು ಸೂಚಿಸುತ್ತದೆ. ಪರ್ಶಿಯಾ ದೇಶಕ್ಕಿಂತ ಕರ್ನಾಟಕ, ಭಾರತ ಶ್ರೇಷ್ಠ ಎಂಬುದು ಬೇಂದ್ರೆ ನಿಲುವು. ಬಾಳಿನಲ್ಲಿ ನಡೆದ ಕಹಿ ಘಟನೆಯಿಂದ ಓಮರ್ ಸುರಾಪಾನ ವ್ಯಸನಕ್ಕೆ ಬಲಿಯಾಗಿದ್ದನು. ವ್ಯಸನದಿಂದ ಅವನು ಪಾರಾದನು ಎಂಬುದಕ್ಕೆ ಕವನ ೫, ೬ ಸಾಕ್ಷಿ 'ಬೆಳಗುಜಾವ' ಮತ್ತು 'ಏಳಣ್ಣ' ಕವನಗಳು ಒಂದೇ ಉಕ್ತಿಗಳ ಭಿನ್ನ ರೀತಿಯ ಅಭಿವ್ಯಕ್ತಿ ಎಂದು ಕಂಡು ಬರುತ್ತದೆ. ಸುರಾಪಾನ ವ್ಯಸನದಿಂದ ಹೊರಬಿದ್ದ ಓಮರನಿಗೆ, ಪ್ರಾತಃಕಾಲ ಏಳುವುದು, ಕ್ರಿಯಾಶೀಲನಾಗುವುದು, ಬೆಳಕಿನ=ಜ್ಞಾನದ ಪಾನ ಮಾಡುವ ಹವ್ಯಾಸ ಬೆಳೆಯಿತು. ಆದುದರಿಂದ ಓಮರ್ ತನ್ನ ಅಂತರಂಗದ ಶಕ್ತಿಗೆ-

''ಏಳು ಚಿನ್ನ, ಬೆಳಗಾಯ್ತು, ಅಣ್ಣ'' ಹಾಗೂ ''ಏಳಣ್ಣ ಬೆಳಗಾಯ್ತು'' ಎಂದು ಎಚ್ಚರಿಸುತ್ತಾನೆ.

''ರಸವೆ ಬಾಳು. ಉಳಿದೆಲ್ಲ ಹಾಳು, ಆ ಸಾಕ್ಷ್ಯ ಬೇರೆ ಬೇಕೆ?
ಸುಖದ ಸಾರವನು ತಿಳಿಯದವಗೆ, ಬದುಕಿದ್ದನೆಂಬುದೇಕೆ?''

ಎಂಬ ನಿರ್ಣಯದಿಂದ ಓಮರ, ತಾರುಣ್ಯದ ಉತ್ತರಾರ್ಧವನ್ನು ಒಳ್ಳೆಯ ಕಾರ್ಯಗಳಿಗೆ ಬಳಸಿಕೊಂಡಿರಬೇಕು ಎಂದು ಊಹಿಸುವಂತಿದೆ. ಓಮರ್ ಮೊದಲು ಕವಿಯಾಗಿ, ಕೀರ್ತಿ ಪಡೆದು, ಅನಂತರ ವಿಜ್ಞಾನ ಮತ್ತು ಶಾಸ್ತ್ರಜ್ಞಾನದಲ್ಲಿ ಪಾರಂಗತನಾಗಿರಲು ಸಾಕು. ಇದೇ ವಿಭಾಗಕ್ಕೆ ಕವನ ೩೨ ''ಈಚಲ ಮರದಮ್ಮ'' ಸೇರಿಸಬೇಕಾಗುತ್ತದೆ. ಇದು ಪಾನಪ್ರೇಮಿ ಪಶ್ಚಾತ್ತಾಪದಿಂದ- ''ಬದುಕಿಸು ನಮ್ಮ, ಈಚಲು ಮರದಮ್ಮ'' ಎಂದು ಪ್ರಾರ್ಥಿಸುತ್ತದೆ.

ಮಹಾರಾಷ್ಟ್ರದಲ್ಲಿ ಇಂದಿಗೂ ಅತ್ಯಂತ ಜನಪ್ರಿಯ ಸಂತಕವಿ-ಜ್ಞಾನೇಶ್ವರ. ಇವನ ಕಾಲ ಕ್ರಿ. ಶ. ೧೨೭೫. ಇವನ ಕೀರ್ತಿ ಬೆಳಸಿದ ಗ್ರಂಥ ''ಜ್ಞಾನೇಶ್ವರಿ''. ಇದು ಭಗವದ್ಗೀತೆಯ ಭಾವಾರ್ಥದೀಪಿಕೆಯಾಗಿದೆ. ಇವನ ಎರಡನೆಯ ಮಹತ್ವದ ಕೃತಿ-ಅಮೃತಾನುಭವ; ಕವನ ೨ ಮತ್ತು ೪೧ ಇವು ಜ್ಞಾನೇಶ್ವರ ರಚಿತ ಮರಾಠಿ ''ಅಮೃತಾನುಭವ''ದ ಕನ್ನಡ ಭಾವಾನುವಾದಗಳು. ಕವನ ೪೧ ರಲ್ಲಿಯ ನುಡಿ ೪ ಮತ್ತು ೭ರ ಇನ್ನೊಂದು ಬಗೆಯ ಭಾವಾನುವಾದ ಕವನ ೨ ರಲ್ಲಿ ಇದೆ. ಎರಡರ ವಿಷಯ ಒಂದೇ ಆದರೆ ಅಭಿವ್ಯಕ್ತಿ ಔಚಿತ್ಯಪೂರ್ಣವಾಗಿದೆ.

''ಎರಡು ದಂಡೆಗೂ ಶ್ರುತಿಯು, ಹೂವೆರಡಕೊಂದೆ ಗಂಧ
ಎರಡು ದೀಪಗಳಲಿ ಒಂದು ಬೆಳಕು, ಬೆಳಗುವುದು ಎನಿತು ಚೆಂದ!
ಎರಡು ತುಟಿಗಳೊಳಗೊಂದೆ ಮಾತು, ಕಣ್ಣೆರಡಕೊಂದೆ ನೋಟ
ಎರಡರಲ್ಲಿ ಒಂದಾಗಿ, ನಡೆದಿರುವುದು ಸೃಷ್ಟಿಯೆಂಬ ಮಾಟ!''

- ಅಮೃತಾನುಭವ

ಇಲ್ಲಿ ದ್ವೈತ ಮತ್ತು ಅದ್ವೈತಕ್ಕೆ ಕೊಟ್ಟ ಉಪಮಾಮಾಲೆಯು ಅದ್ವೈತ ಶ್ರೇಷ್ಠ ಎಂದು ಸಾರುತ್ತದೆ. ದ್ವೈತ ಎಂಬುದು ಪ್ರಕೃತಿ, ಅದ್ವೈತ ಸಂಸ್ಕೃತಿ. ಇದೇ ಸೃಷ್ಟಿಯ ಮಾಟ!

ಕವನ ೪೧ ನುಡಿ ೪ ಹೀಗಿದೆ-

''ತಾವು ಇಬ್ಬರೂ ಒಬ್ಬರನ್ನುವದ ತೋರಿಸುವರು ಸತತ
ಅಗಲಿಕೂಡ ಒಂದಾಟ ಹೂಡಿ ಜಗಭರಿತರಾಗಿ ವಿತತ
ಬಿಂದು ರಜದ ಸಂಧಾನದಂತೆ ಈ ತಂದೆ ತಾಯಿಗೊಂದು
ಶರಣು ಹೋಗುವೆವು ನಮ್ಮ ಪಡೆದವರ ನಾವೆ ಪಡೆಯಲೆಂದು,''

- ಅಮೃತಾನುಭವ

ಎಂಬುದು ಜನನದ ವೈಜ್ಞಾನಿಕತೆಯನ್ನು ವಿವರಿಸುತ್ತದೆ. ತಂದೆಯ ಬೀಜಬಿಂದು+ತಾಯಿಯ ರಜೋಬಿಂದುವಿನೊಂದಿಗೆ ಸಮರಸವಾದಾಗ. ಜನನ.

ಪ್ರಕೃತಿ+ಪುರುಷ=ಮಗುವಿನ ಜನನ ಇದು ಸೃಷ್ಟಿಯ ನಿಯಮ.

''ಬೇರಿಗಿವನು, ಗೊನೆಫಲದಲಿವನು, ನಡುಮೈಯೊಳಿವನೆ ಇವನು
ಮೂಲ, ಮಧ್ಯ, ಮತ್ತಗ್ರದಲ್ಲಿ ಒಂದಾದ ಮೂರ್ತಿ ಶಿವನು.
ಸುತ್ತಲೆಲ್ಲ ಸರ್ವತ್ರ ಮೇಲು, ಒಳ-ಹೊರಗು ಅವನ ಕಾಂಬೆ
ಮೂರ ಮೀರಿ ಒಳಗೊಂಡ ಪೂರ್ಣ ಶಂಭುವಿಗೆ ನಮೋ ಎಂಬೆ''

- ಅಮೃತಾನುಭವ

ಎಂಬ ಕವನ-೨ ರ ೨ನೆಯ ನುಡಿ - ಅ, ಉ, ಮ ಎಂಬ ಮೂರನ್ನು ಮೀರಿದ ೪ ಎಂದರೆ ಪೂರ್ಣ ಶಂಭು! ೧+೨+೩+೪=೧೦. ೧೦ ಇದು ಪೂರ್ಣದ ಸಂಕೇತ. ಜೀವನದಲ್ಲಿ ಪೂರ್ಣತ್ವಸಿದ್ಧಿಗಾಗಿ. ಅನಾಹತನಾದ-ಓಂಕಾರದ ಉಪಾಸನೆ ಅವಶ್ಯ. ಈ ಓಂ ಎಲ್ಲ ವರ್ಣಗಳಿಗೆ, ನುಡಿಗಳಿಗೆ ಮೂಲ. ಇದು ಓಂ ನುಡಿಯ ಶಾಶ್ವತ ಮೌಲ್ಯ. ಇದನ್ನು ಕವನ-೨ರ ನುಡಿ ೬ ವಿವರಿಸುವುದು ಹೀಗೆ-

''ಇದಕ್ಕಿಂತ ಹೆಚ್ಚು ಒಳಿತಾವುದನ್ನು ಆ ಶಬ್ದ ಮಾಡಲಹುದು?
ಅದೊ ಅಬುದ, ಶಬುದ, ಬುದ್ಬುದವು (೧+೨+೩) ಒಡೆದು ಹುಸಿ
ಸದ್ದು ಹೊರಡಬಹುದು.
ನುಡಿಮುಡಿದುಕೊಂಡು, ಮೆರೆಯುವದು ಮುಂದಿ ಜಗದಲ್ಲಿ ಹಿಂದುಮುಂದು
ಒಡನಾಡಿ ನೆನಪು ಮೂಡುವುದು ನುಡಿಗೆ, ನುಡಿ ಬೆಲೆಯು ಅದುವೆ ಒಂದು''

ಈ ಒಂದೇ-ಓಂಕಾರ. ಇದರ ಬೆಲೆ ಅಧ್ಯಾತ್ಮಶಾಸ್ತ್ರದಲ್ಲಿ ಅತ್ಯಂತ ಶ್ರೇಷ್ಠ.

ಗುರು, ನಿವೃತ್ತಿನಾಥ ಮತ್ತು ಜ್ಞಾನದೇವ, ಇವರಿಗೆ ಆದ ಸ್ವರೂಪ=ಆತ್ಮ ಸಾಕ್ಷಾತ್ಕಾರ. ಇದು ಪೂರ್ಣತ್ವ ಇದೇ ಹುಟ್ಟು ಸಾವು ಮೀರಿದ ಆತ್ಮ ತತ್ತ್ವ. ನಿವೃತ್ತಿನಾಥರಿಗೆ ಶಾಬರಿ, ಶಾಂಕರಿ ವಿದ್ಯೆಯ ಅನುಗ್ರಹ ಗುರು ಕೊಡುತ್ತಾನೆ. ಇದನ್ನೇ ನಿವೃತ್ತಿನಾಥ ಜ್ಞಾನೇಶ್ವರರಿಗೆ ಉಪದೇಶಿಸುತ್ತಾನೆ. ಏಕೆಂದರೆ ಇದು ಜ್ಞಾನೇಶ್ವರರ ಭಾಗ್ಯ. ನಿವೃತ್ತಿನಾಥ ನಿಮಿತ್ತ ಮಾತ್ರ. ಶಿವ ಮತ್ತು ಶಕ್ತಿಯ ಐಕ್ಯ ಜಗತ್ತಿನ ಜನ್ಮಕ್ಕೆ ಕಾರಣ. ಶಕ್ತಿ=ಸ್ವಾಮಿನಿ; ಶಿವ=ಸ್ವಾಮಿ. ಸ್ವಾಮಿ+ಸ್ವಾಮಿನಿ ಎಂಬುದು ಅವಿಭಕ್ತ ಭಕ್ತಿ=ಅದ್ವೈತ. ಇದು-

''ಒಂದೇ ನೀರು ಹರಿಯುವದು ಒಡಲಿನಲಿ ಉಗಮ, ಮುಖಗಳಲ್ಲು
ವೇದ ಕೀರ್ತಿಸಿದ ವೇದಮೂರ್ತಿ ನೀ ಬಂದಿ ಭೇದ ಬೇಕೆ?''

ಎಂದು ಪ್ರಶ್ನಿಸಿ-ಕಂಪು=ಮೂಗು; ನಾದ=ಕಿವಿ; ಕನ್ನಡಿ=ಕಣ್ಣು; ರುಚಿ=ನಾಲಿಗೆ; ಸ್ಪರ್ಶ=ಗಾಳಿ. ಈ ಪಂಚ ಜ್ಞಾನೇಂದ್ರಿಯ ಮತ್ತು ಪಂಚ ವಿಷಯಗಳ ಐಕ್ಯವಾದಾಗ-

''ತಲೆಯಲ್ಲಿ ಹೂವು ಅರಳಿರಲು (ಸಹಸ್ರಾರು ಚಕ್ರದ ಕಮಲ=ಪರಿಪೂರ್ಣ ಜ್ಞಾನವಾದಾಗ) ಮುಡಿಸಿಕೊಳಲೇಕೆ ತಳಿರ ತೊಳಲು?'' ಎಂಬ ಎರಡನೆಯ ಪ್ರಶ್ನೆ

ಕೇಳಲಾಗಿದೆ. ಇದಕ್ಕೆ ಉತ್ತರ ನುಡಿ ೧೦, ೧೧ ರಲ್ಲಿ ಅಧ್ಯಾತ್ಮದ ಅನುಭಾವ ವರ್ಣಿಸಲಾಗಿದೆ. ತಳಿರು=ಚಿಗುರು+ಕೋಗಿಲೆ+ಸುಮಧುರ ಕಂಠದ ಪಂಚಮದ ಇಂಚರ+ಇದರ ಶ್ರುತಿಯು ರಸಾನಂದ ಎಂಬ ನಾಲ್ಕು ಕೂಡಿ ಪರಿಪೂರ್ತಿ. ಇದು ಈಶನ=ಶಿವನ ಓಜ. ಈಶನ ಶಕ್ತಿ-ಈಶೆ ಎಂದು ಮಹಾಕವಿ ಕಾಳಿದಾಸ ವರ್ಣಿಸಿದ್ದಾನೆ. ಚಂದ್ರ+ಬೆಳುದಿಂಗಳ ಎಂಬ ಅಮೃತ+ಅದರಪಾನ+ಮೋಡ ಮತ್ತು ಮಳೆಗರೆಯುವಿಕೆ ಕೂಡಿ ಇನ್ನೊಂದು ಅನುಭಾವ! ಇದಕ್ಕೆ ಸರಿಸಮಾನವಾದ ಹಣತೆ+ಸೊಡರು+ಬೆಳಕು+ನಿಖಿಲ ಲೋಕವ್ಯಾಪ್ತಿ ಕೂಡಿ ಮೂರನೆಯ ಅನುಭಾವ. ಪ್ರತಿ ಅನುಭಾವಕ್ಕೂ ನಾಲ್ಕು ನೆಲೆಗಳು ಎಂಬುದು ವಿಶೇಷ.

ಜ್ಞಾನೇಶ್ವರರು ಅನುಭವದ=ಅನುಭಾವದ=ಆತ್ಮಾನುಭೂತಿಯ ಅಮೃತ ಪಡೆದರು. ಇದರಿಂದ ತಾವು ತೃಪ್ತರಾದದ್ದಲ್ಲದೆ, ಮುಕ್ತರಿಗೂ=ಜ್ಞಾನಿಗಳಿಗೂ ತೃಪ್ತಿ ಉಣಿಸಿದರು. ''ಸಾಹಿತ್ಯವೆಲ್ಲ ಐವತ್ತೂ ವರ್ಣ, ಓಂಕಾರ ಅದರ ಸಾರ''. ಓಂಕಾರದ-ಅ, ಉ, ಮ ಮೀರಿ ನಾಲ್ಕನೆಯವನು ಪೂರ್ಣ ಶಂಭು! ಇದರ ಪ್ರಾಪ್ತಿ - ಅಹಂ ಬ್ರಹ್ಮಾಸ್ಮಿ, ಅಯಂಆತ್ಮಾ, ತತ್+ತ್ವಂ+ಅಸಿ ಮತ್ತು ರಸೋಹಂ ಎಂಬ ನಾಲ್ಕರ ಜ್ಞಾನ. ಈ ಬ್ರಹ್ಮದಲ್ಲಿ ಅಬಲ ಬ್ರಹ್ಮ, ಸಬಲಬ್ರಹ್ಮ, ಪರಮಾತ್ಮ ಮತ್ತು ವಿಶ್ವದ ಅರಿವು ಎಂಬ ನಾಕು ಸ್ಥಿತಿಗಳಿವೆ. ಇದನ್ನು ತಿಳಿದುಕೊಳ್ಳುವುದೆಂದರೆ-ಜೀವನದ ಅಶ್ಯಾಶ್ವತೆಯನ್ನು ದಾಟಿ, ಐಶ್ವರ್ಯ ಪ್ರಾಪ್ತ ಮಾಡಿಕೊಳ್ಳುವಿಕೆ. 'ಸುಡುಬೆರಳನೆತ್ತಿ ತೋರಿಸುವವರಾರು ಶಿವಶಕ್ತಿ ಬೇರೆ ಮಾಡಿ?'' ಎಂದು ಪ್ರಶ್ನಿಸಲಾಗಿದೆ. ಈ ಕಾರ್ಯ ಪೂರ್ತಿಮಾಡಿದನು ಜ್ಞಾನದೇವ!

'ನಾನು' ಎಂಬುದರ ಆತ್ಮಜ್ಞಾನದ ಅರಿವಾದಾಗ-ಪ್ರಭು, ಪ್ರಭಾವ, ವಿನ್ಯಾಸ ಅರ್ಥವಾಗುತ್ತದೆ. ಈ ಅರಿವಿನ-ಹರಿವು- 'ನಾ ನನ್ನ ನೆಟ್ಟು, ಆನಂದಬಟ್ಟು, ನನ್ನಲ್ಲಿ ನಾನೆ ಪಡೆವ! ಎಂಬ ಸ್ವಪ್ರಕಾಶವಸ್ತು! ಇದನ್ನು ಬೆಳಗಬಹುದಾದ ಮತ್ತೊಂದು ಬೇರೆ ಬೆಳಕಿಲ್ಲ.

''ಇದನ್ನು ಬಿಟ್ಟು ಅನುಭವದ ಹಾದಿಯಲಿ ಬೇರೆ ಗುಟ್ಟು ಇಲ್ಲ<br>
ತಾನೆ ದೃಶ್ಯ, ದೃಷ್ಟಾರ, ತಾನೆ, ಸಂವಿದ್ರಹಸ್ಯವೆಲ್ಲ<br>
ಎಂದಿನಂತೆ ಅಮ ಇಂದಿಗೂನು ಸಿದ್ಧಾಂತದಾರಪಾರ<br>
ಯಾರು ಹೇಳಿದರು, ಹೇಳದಿದ್ದರೂ 'ಸತ್ಯಚಿತ್ರಸಾರ''

- ಅಮೃತಾನುಭವ

ಎಂದಿದ್ದಾರೆ ಜ್ಞಾನೇಶ್ವರರು.

ಜೀವ, ಜಗತ್ತು ಆತ್ಮ ಮತ್ತು ಪರಮಾತ್ಮ ಈ ನಾಕೂ ಒಂದು ಎಂಬುದನ್ನು ಭಾರತೀಯ ಅಧ್ಯಾತ್ಮಶಾಸ್ತ್ರ ತಿಳಿಸಿಕೊಡುತ್ತದೆ. ಜೀವ=ದೇಹಧಾರಿ. ಜನತೆ+ಜಗತ್ತು=ಭಾರತದ ಸ್ವಾತಂತ್ರ್ಯ+ಆತ್ಮ ಮತ್ತು ಪರಮಾತ್ಮ ಐಕ್ಯವೇ ಆನಂದ ಎಂಬುದು ಸ್ವಾತಂತ್ರ್ಯಕ್ಕಾಗಿ ಹೋರಾಡುವವರು ತಿಳಿದುಕೊಂಡಿದ್ದರು. ಪಾರತಂತ್ರ್ಯದಿಂದ ಮುಕ್ತಿ ಭಾರತಕ್ಕೆ ಬೇಕಾಗಿತ್ತು, ಆತ್ಮಜ್ಞಾನವೆಂಬ ಮುಕ್ತಿ ಚಿಂತಕರಿಗೆ ಬೇಕಾಗಿತ್ತು. ಈ ಎರಡೂ ಮುಕ್ತಿಗಳ

ಸಾರ-ಉಪನಿಷತ್ತುಗಳಲ್ಲಿ ವಿವರಿಸಲಾಗಿದೆ. ''ಮನದಿಂದ ಮುಕ್ತರಾದವರು ಭಗವಂತಯುಕ್ತರಾಗುವರು'' ಇದೇ ನಿಜವಾದ ಸ್ವಾತಂತ್ರ್ಯ=Freedom. ಶ್ರೀ ಅರವಿಂದರು ೧೮೭೨ ರಿಂದ ೧೯೫೦ ರಲ್ಲಿ ಬಾಳಿದ ಮಹಾಯೋಗಿ. ಇವರು''Free Action is the action of the Divine in us and through us; no other action can be free'' ಎಂಬುದಾಗಿ Freedom ದ ವ್ಯಾಖ್ಯೆ ಕೊಟ್ಟಿದ್ದರು. ಇದನ್ನು ಬೇಂದ್ರೆಯವರು ''ದತ್ತ ಸ್ವಾತಂತ್ರ್ಯ'' ಎಂದು ಗುರುತಿಸಿದರು. ಪ್ರತಿಯೊಬ್ಬ ''ನಾನು''ಗೆ ಸ್ವಾತಂತ್ರ್ಯ ಇದ್ದೇ ಇರುತ್ತದೆ, ಕೊಡಲ್ಪಟ್ಟಿರುತ್ತದೆ. ಕೊಟ್ಟವರು ಯಾರು ಎಂಬುದರ ಅರಿವಾಗಿ, ಹರಿವು ಆಗುವುದೇ ಆತ್ಮಜ್ಞಾನ. ಶ್ರೀ ಗುರು ಅರವಿಂದರಿಂದ ಬೇಂದ್ರೆ ಪಡೆದ ಪ್ರೇರಣೆಗಳೆಲ್ಲ ''ಹೃದಯ ಸಮುದ್ರ'' ಕವನ ಸಂಗ್ರಹದಲ್ಲಿ ಅನೇಕ ಕವನಗಳಾಗಿವೆ. ಕಾಳಿದಾಸ, ಶಂಕರಾಚಾರ್ಯ, ಓಮರ್, ಜ್ಞಾನೇಶ್ವರ, ಶ್ರೀ ಅರವಿಂದ ಹಾಗೂ ರಮಣ ಮಹರ್ಷಿ ಎಂಬ ಆರು ವ್ಯಕ್ತಿತ್ವಗಳು, ಬೇಂದ್ರೆವ್ಯಕ್ತಿತ್ವ ರೂಪಿಸಿದ ಆಧಾರ ಸ್ತಂಭಗಳು. ರಮಣರ ಕಾಲ ೧೮೮೦ ರಿಂದ ೧೯೫೦. ಇವರ ''ರಮಣ ಹೃದಯ''ದ ಭಾವಾನುವಾದವೇ ''ಮುಕ್ತಕಂಠ'' ಸಂಗ್ರಹದ ಪ್ರಥಮ ಕವನ. ಇದರ ವಿಷಯವೂ ಈವರೆಗೆ ವಿವೇಚಿಸಿದ ಆತ್ಮಜ್ಞಾನದ ಮಹತಿಯ ವರ್ಣನೆ. ಅದರ ರೀತಿಯನ್ನು ಅರಿತುಕೊಳ್ಳೋಣ. ಅದು ಹೀಗಿದೆ-

''ನಾನುಂಟೆ? ಜಗವುಂಟು; ಅವನುಂಟು; ಮೂರುಂಟು''

'ನಾನು'ಉಂಟೆ ಎಂಬುದು ಆತ್ಮಸಂಶೋಧನೆಯ ಪ್ರಶ್ನೆ. ಜಗಉಂಟು ಎಂಬುದು ಪ್ರತ್ಯಕ್ಷ ಕಣ್ಣಿಗೆ ಕಾಣುವ ಮಾತು. ಅವನುಂಟು=ಪರಮಾತ್ಮ-ಅಪ್ರತ್ಯಕ್ಷ, ಅಪರೋಕ್ಷಾನುಭೂತಿಯಿಂದ ತಿಳಿದುಕೊಳ್ಳಬೇಕಾದ ವಿಷಯ. ಈ ೩ ಉಂಟಿನ ಅರಿವು ಆಗುವುದು; ''ನಾನು'' ಇಲ್ಲ ಆದಾಗ ಮಾತ್ರ. ಇದೇ ಜೀವಾತ್ಮ+ಪರಮಾತ್ಮ ಐಕ್ಯದ ರಸಾನಂದ ಸ್ಥಿತಿ! ಇದು ತಾನು, ತನ್ನರಿವು ಮಾಡಿಕೊಳ್ಳಬೇಕಾದ ಜ್ಞಾನ!

''ಅಯ್ದು ಚೀಲಗಳಲ್ಲಿ ಮೈ ತುಂಬಿಕೊಂಡಿದೆ''

ದೇಹಕ್ಕೆ ಮೈ ಇದೆ. ಜಗಕ್ಕೆ ಆಕಾರ=ಮೈ ಇದೆ. ಪರಮಾತ್ಮನಿಗೂ ಮೈ=ನಿರಾಕಾರ ಇದೆ. ಈ ಮೈಗೆ ಸಾವಿದೆ. ದೇವರಿಗೂ ಮೈ ಇದ್ದುದರಿಂದ ಅವರಿಗೂ ಸಾವು ತಪ್ಪಿಲ್ಲ. ಇದ್ದಾಗ, ಸಾವು ಇಲ್ಲದ=ಅಮರತ್ವದ ಅನುಭವ ಪಡೆಯುವುದೇ=ಅಮೃತಾನುಭವ=ನಿಜವಾದ ಮುಕ್ತಿ. ಈ ಅರಿವಿಗೆ ಮನವೇ ಮೂಲ. ಮನದ ತನವನ್ನು ಅರಿತುಕೊಳ್ಳಬೇಕಾಗುತ್ತದೆ. ಈ ಮನವೇ ಬಂಧ ಮತ್ತು ಮುಕ್ತಿಗೆ ಕಾರಣ ''ಮನ ಏವ ಕಾರಣಂ ಬಂಧ ಮೋಕ್ಷಯೋಃ''.

''ಮರೆವಿಲ್ಲದರಿವಿಲ್ಲ ಅರಿವಿರದೆ ಮರೆವಿಲ್ಲ।
ಒಂದನೊಂದನು ಅವು ಹೊಂದಿಹವು ॥
ಇದರ ಇಬ್ಬಗೆ ಬಗೆದು ಒಳಹೊಕ್ಕು ನೋಡಲು।
ಬೇರು, ಬೀಜದ ಒಳಗು ತಾನಹುದು''

- ರಮಣ ಹೃದಯ - ನುಡಿ ೧೨

"ತನ್ನ ತಾ ತಿಳಿಯದ ಆ ಜ್ಞಾನ ಅಜ್ಞಾನ।
ಒಳಹುರುಳ ತಿಳುವಳಿಕೆ ಎಂದಾದೀತು? ॥
ಅರಿವಿಗು ಮರೆವಿಗು ಇರವೆ ಆಧಾರವು।
ಆಧಾರ ಒಳಬಟ್ಟೆ ಮುಟ್ಟುವದು ಮರೆವಿಲ್ಲದರಿವಿಲ್ಲ ಅರಿವಿರದೆ ಮರೆವಿಲ್ಲ।
ಒಂದನೊಂದನು ಅವು ಹೊಂದಿಹವು ॥
ಇದರ ಇಬ್ಬಗೆ ಬಗೆದು ಒಳಹೊಕ್ಕು ನೋಡಲು।
ಬೇರು, ಬೀಜದ ಒಳಗು ತಾನಹುದು"

- ರಮಣ ಹೃದಯ - ನುಡಿ ೧೩

'ತಾನು' ಎಂಬ 'ಬೆಳಕು', 'ತಾನು' ಎಂಬ ತಂತಿ ಪ್ರತಿಯೊಬ್ಬರ ಎದೆಯಲ್ಲಿ=ಹೃದಯದಲ್ಲಿ ಅಡಗಿ ಇರುತ್ತದೆ. ಇದರ ಜ್ಞಾನ ಆಗುವುದು ದೈವದ ಮಾತು. ಆದರೆ ಪ್ರಯತ್ನದ ಪೌರುಷ=ಸಾಧನೆ ಅವಶ್ಯ. ದೈವಕ್ಕೆ ಐದನೆಯ ಸ್ಥಾನ "ದೈವಾತ್ರ ಪಂಚಮಂ' ಎಂದು ಭಗವದ್ಗೀತೆ ಸಾರಿದೆ., ಕಾಂಬನು=ಕಾಣುವ ತತ್ತ್ವ; ಕಾಂಬುವುದು=ಕಾಣುವುದು ಕಣ್ಣಿಗೆ-ದೃಷ್ಟಿ; ಇದಕ್ಕೆ ಮೀರಿದ ಅಸು=ಪ್ರಾಣ=ಅಂಗುಷ್ಟ ಮಾತ್ರ ಪುರುಷ=ಆತ್ಮ. ಆತ್ಮ ಎಂಬುದು ಬಿಳಿಬೆಟ್ಟ=ಬೆಳಕು. ಈ ಆತ್ಮದ ಬೆಳಕಿನಲ್ಲಿ ಪರಮಾತ್ಮನ=ಬಿಂಬದ ಪ್ರತಿಬಿಂಬ ಬೀಳಬೇಕಾದರೆ ಸಾಧನೆ ಅವಶ್ಯ.

"ನಾನುಂಟು, ನೀನುಂಟು, ಅವನುಂಟು. (ಆತ್ಮ), ಏಕಿಲ್ಲ? ।
ತಾನೆ ತಾನಾದಾಗ (ಪರಮಾತ್ಮ ತತ್ವದಲ್ಲಿ ಐಕ್ಯ ಹೊಂದಿದಾಗ) ನಾನಿಂಗಿತು ॥
ನಾನಿಲ್ಲ, ನೀನಿಲ್ಲ, ಅವನಿಲ್ಲ, ತಾನೊಂದು। (ತಾನೊಂದೇ ಇದೆ)
ಗಾಳಿ ನುಂಗಿದ ಬೆಳಕಿನಂತಿದ್ದಿತು" (ಅದು ಗಾಳಿ, ಅದು ಬೆಳಕು ಎಂಬ ಬೋಧವಾಗಬೇಕು.
ಇದು "ಗಾಳಿ ನುಂಗಿದ ಬೆಳಕು)

- ರಮಣ ಹೃದಯ - ನುಡಿ ೧೬

ಈ ಕ್ರಿಯೆ ನಡೆಯುವಾಗ ಸಾಧಕನಿಗೆ ಹಮ್ಮು=ಅಹಂಕಾರ (ಅಹಂ ಬ್ರಹ್ಮಾಸ್ಮಿ, ಅಯಂಆತ್ಮಾ, ತತ್ತ್ವಮಸಿ, ರಸೋಹಂ) ಇವುಗಳ ಅರುಣೋದಯ ಆಗುತ್ತದೆ. ಈ ಸಿದ್ಧಿ ಮಹಾ ಆತಂಕ-ಮುಂದಿನ ಪ್ರಗತಿಗೆ.

"ನಾನು ತಾನಿನ ಗಂಟು ಸಣ್ಣಿಳೆ ಒಳಗುಂಟು।
ಅರಿವೆ ಮೈವೆತ್ತುಸಿರಿನವ ಜೀವನು."

- ರಮಣ ಹೃದಯ - ನುಡಿ ೨೬

ಹಮ್ಮು ಮೂಡಿದ ಒಡನೆ ಉಳಿದೆಲ್ಲ ಮೂಡುವದು।
ಹಮ್ಮಿನ ಒಡನೆಲ್ಲಾ ಮುಳುಗುವದು ॥
ಮಾಟದ ಸೃಷ್ಟಿಗೆ ಹಮ್ಮೆ ಬ್ರಹ್ಮವು ; ಅದನೆ।
ಹುಡುಕಲೆಲ್ಲವ ಗೆಲ್ಲಲದು ಹಾದಿಯು.

- ರಮಣ ಹೃದಯ - ನುಡಿ ೨೮

ಅಹಂಕಾರ ಗೆದ್ದಾಗ, ಮುಂದಿನ ಹಾದಿ ಕಾಣುತ್ತದೆ. "ಹಮ್ಮಿನ ಮರವನ್ನು ಬೇರುಸಹಿತ ಕಿತ್ತಿಹಾಕಿರಿ" ಎಂದಿದ್ದಾರೆ ರಮಣರು. ಆಗ ಮಾತ್ರ "ತಾನಿನ ತಾದಾತ್ಮ್ಯಸಾಧ್ಯ", ತಾನಿಲ್ಲ, ಇದಿರಿಲ್ಲ (ದೃಶ್ಯವಿಲ್ಲ). ತಾನೆಲ್ಲ ಕಂಡವನ ಸ್ಥಿತಿಯನ್ನು ಸಿಕ್ಕವನೇನು ಬಲ್ಲ? ಇದರ ಜ್ಞಾನವಾಗಲು ಎಂಟೆದೆ ಬೇಕು. ತಾನಾದವಗೆ ಮಾಯೆ ಮುಸುಕುವದಿಲ್ಲ. "ನರನಲ್ಲಿ ನಾರಾಯಣನಿರುತ್ತಾನೆ" ಎಂಬುದರ ಮನನ ಮಾಡಬೇಕು. ಸತತ ನಮನದಿಂದ! ದ್ವೈತದಲ್ಲಿಯೇ ಅದ್ವೈತ ಅಡಿಗಿರುತ್ತದೆ ಎಂಬುದು ಒಪ್ಪಿಗೆಯಾಗುತ್ತದೆ. ಇದು ಪ್ರಕೃತಿಧರ್ಮ, ದೇಹಧರ್ಮ, ಪಂಚಜ್ಞಾನೇಂದ್ರಿಯ ಮತ್ತು ಪಂಚ ವಿಷಯಧರ್ಮ. ಶಿವ+ಶಕ್ತಿ=ಒಂದು=ಅದ್ವೈತ ಎಂಬುದರ ಅರಿವಾಗದವನು, ಹತ್ತು ಹುಚ್ಚರನ್ನು ಎಣಿಸುವ ಭರದಲ್ಲಿ ತನ್ನನ್ನೇ ಎಣಿಸಲು ಮರೆತ ಮಹಾ ಮುರ್ಖನಿಗೆ ಸಮ ಎಂದು ರಮಣರು ಸಾರಿದ್ದಾರೆ.

"ನಾನಿಲ್ಲ ತಾನುಂಟು ಎಂದೆದೆಗಂಡರೆ।
ಮೂರು ಕರ್ಮವು ಮುಗಿದು ಮುಕ್ತಿಬಲ."

- ರಮಣ ಹೃದಯ - ನುಡಿ ೪೦

ಪೂರ್ವಜನ್ಮ+ಈ ಜನ್ಮ+ಮುಂದಿನ ಜನ್ಮ ಎಂಬ ಮೂರೂ ಜನ್ಮದ ಕರ್ಮ ತೀರಿ, ಮುಕ್ತನಾಗುವವನು ಆತ್ಮಜ್ಞಾನಿ. ಭೂಲೋಕದಲ್ಲಿ ಜನ್ಮ ಪಡೆದು ಇರುವಾಗಲೆಲ್ಲ, ಸತ್ತ ಅನುಭವ ಹೊಂದಿದರೆ ಅದು ಶಾಶ್ವತ ಮರಣ. ಪ್ರತಿಕ್ಷಣ ಇರುವಿಕೆಯನ್ನು, ಅರಿಯುವಿಕೆಯನ್ನು, ಹರಿಯುವಿಕೆಯನ್ನು ಅನುಭವಿಸಿದರೆ - ಎದ್ದಸಲ ನವೀನ ಜನನ! ಈ ಅನುಭಾವಬೋಧ ರಮಣರಿಗೆ+ಅರುಣಾಚಲ ಪ್ರದೇಶದಲ್ಲಿ+ಗಣಪತಿಮುನಿಗಳ ತಂತ್ರದಿಂದ ಜ್ಞಾನೋದಯವಾದದ್ದು ಸಂಸ್ಕೃತದಲ್ಲಿ. ಅದರ ಧ್ವನಿ ದತ್ತಾತ್ರೇಯ ರಾಮಚಂದ್ರ ಬೇಂದ್ರೆಯವರಲ್ಲಿ ಅರ್ಥವಾದ ರೀತಿಯಲ್ಲಿ ಅವರು "ಕನ್ನಡದಲ್ಲಿ ಕನ್ನಡಿಸಿದರು".

"ದತ್ತವಾಯಿತು ವಾಣಿ ಗುರುಗಳಡಿಗಳಲ್ಲಿ।
ಅವರಾಡಿದ್ದಾಡಿದರೆ, ತಪ್ಪೇನಿದೆ ?॥
ಕನ್ನಡ ಮುನ್ನಡೆ, ಗುಡಿಯೆತ್ತಿ ಬರುತಿದೆ॥
ತನ್ನ ತಾನರಿಯೆಂದು ಒಪ್ಪಿಸಿದೆ."

- ರಮಣ ಹೃದಯ - ನುಡಿ ೪೬

"ಗುರು ಅರವಿಂದರ, ಅರಿವಿಂದ ಅರಳಿದ।
ಅರವಿಂದ ಮಕರಂದ ಬೆಳೆಯುತಿರೆ॥
ಮಾತೆಯ ನೆನಹಿಗೆ ಮಾತೆಲ್ಲ ಹೂತಿರೆ।
ಸ್ವರಸ ಸರಸತಿಯಾಗಿ, ಹರಸುತಿದೆ."

- ರಮಣ ಹೃದಯ - ನುಡಿ ೪೯

ಎಂಬ ಅನುಭಾವಬೋಧ ಸಂಖ್ಯಾ ಭಾಷೆಯಲ್ಲಿ ಮುಂದಿನ ಆಯುಷ್ಯದಲ್ಲಿ

ಬೇಂದ್ರೆಯವರಿಗೆ ಆಗುತ್ತ ಹೋಯಿತು. ''ರಮಣ ಹೃದಯ'' ದ ಕನ್ನಡ ಭಾವಾನುವಾದ ಮಾಡಿದ್ದು ೨೨-೧೧-೧೯೩೮ರಲ್ಲಿ. ಅದನ್ನು ಪ್ರಕಟಪಡಿಸಿದ್ದು ೧೯೫೬ರಲ್ಲಿ. ಇಲ್ಲಿ ಹರಳುಗಟ್ಟಿದ ನಾನು, ನೀನು, ಆನು, ತಾನು ಎಂಬ ತತ್ತ್ವ ವಿಚಾರ ''ನಾಕುತಂತಿ''ಗಳಾಗಿ ಯೋಗಕಾವ್ಯವಾಗಿ ಪ್ರಕಟಗೊಂಡದ್ದು ೧೯೬೪ರಲ್ಲಿ. ಈ ''ನಾಕುತಂತಿ'' ಕವನ ಸಂಗ್ರಹಕ್ಕೆ ಜ್ಞಾನಪೀಠ ಪ್ರಶಸ್ತಿ ಲಭಿಸಿದ್ದು ೧೯೭೪ರಲ್ಲಿ. ಈ ವರೆಗೆ ವಿವರಿಸಿದ ಹತ್ತೂ ಕವನಗಳು ಬೇಂದ್ರೆಯವರ ಜೀವನ ಮಹಾಕಾವ್ಯ - ''ಔದುಂಬರಗಾಥೆ''ಯ ನವಮ-ಪ್ರಥಮ ಸಂಪುಟದಲ್ಲಿ ಸೇರ್ಪಡೆಯಾದದ್ದು ವಿಶೇಷ. ೨೦೦೩ರಲ್ಲಿ ''ಔದುಂಬರಗಾಥೆ'' ಪ್ರಕಟಿಸುವಾಗ, ಕೈತಪ್ಪಿನಿಂದ ಉಳಿದುಬಿಟ್ಟ ''ರಮಣ ಹೃದಯ''ದ ೫೦ನೆಯ ನುಡಿ ಸೇರಿಸಲಾಯಿತು. ಅದು ಹೀಗಿದೆ-

''ಅಂಬಿಕಾತನಯನ ಚುಂಬಿಸಿದಳು ತಾಯಿ।
ಆ ಬಾಯಿಯಾಯಿತು ಹಾಡಹೊಳೆ॥
ತಾಯಿಯ ಎದೆಹಾಲಿನಂತಿದ್ದ ರಮಣರು।
'ಇದೆ' ಎನಲು ಅದೆಯಾಯ್ತು ಎದೆಯ ಬೆಳೆ.''

- ರಮಣ ಹೃದಯ - ನುಡಿ ೫೦

ಈ ನುಡಿ ಬೇಂದ್ರೆಯವರು ರಮಣರಿಗೆ ಸಲ್ಲಿಸಿದ ಕೃತಜ್ಞತೆ. ಇದು ಕವಿ ಬೇಂದ್ರೆಯವರ ಪ್ರಜ್ಞಾಪ್ರಾಮಾಣಿಕತೆ.

೨. ಬಹಿರಂಗ-ಅಂತರಂಗ ಸಂಬಂಧ :

ಈ ವಿಭಾಗದಲ್ಲಿ ೧೭ ಕವನಗಳಿವೆ. ಅವುಗಳ ಅಂತರಾರ್ಥವನ್ನು ಅತ್ಯಂತ ಸಂಕ್ಷಿಪ್ತವಾಗಿ ತಿಳಿದುಕೊಳ್ಳೋಣ. ಕಣ್ಣಿಗೆ ಕಾಣುವ ಜಗತ್ತು - ಪೃಥ್ವಿ, ಆಪ್, ತೇಜ, ವಾಯು, ಆಕಾಶ ಎಂಬ ಪಂಚ ತತ್ತ್ವಗಳಿಂದ ವ್ಯಾಪ್ತವಾಗಿದೆ. ಈ ಪಂಚಮಹಾಭೂತಗಳು ಮನುಷ್ಯನ ದೇಹವನ್ನೂ ವ್ಯಾಪಿಸಿವೆ. ''ಒಂದೇ ತತ್ತ್ವ ಐದಾಗಿದೆ. ಐದು ಬೆರಳಿನ ಶಸ್ತ್ರವಾಗಿದೆ. ಬೇರು ಬುಡಕಿದೆ; ಮರವು ತುದಿಗಿದೆ'' ಎಂದಿದ್ದಾರೆ ಬೇಂದ್ರೆ. 'ಬೀಜವೃಕ್ಷ ನ್ಯಾಯ'ದ ನೆನಪು ಇಲ್ಲಿ ಪ್ರಸ್ತುತ.

''ಹೊರಗೆಲ್ಲೋ ಬಾನಾಗಿದೆ (ಜಗತ್ತು)
ಒಳಗಿಲ್ಲೇ ನಾನಾಗಿದೆ (ಜೀವ)
ಕಣ್ಣೆದಿರಿನೊಳಗೆಲ್ಲಲ್ಲೂ ಅಗೊ ಒಡವೆಯೆ ಒಡವೆ.
ಅಲ್ಲೂ ಇಲ್ಲೂ ಒಂದೇ
ಕಣ್ಣಲ್ಲೂ ಕಣ್ಮುಂದೆ
ಈ ತುದಿ ಆ ತುದಿ ಬೆಳಕೇ ಬೆಳಕೇ ನಡುನಡುವೆ.'' (ಆತ್ಮಜ್ಞಾನ)

- ಪಂಚಮುಖ

''ದೇಹ, ಪ್ರಾಣ, ಮನಗಳಲ್ಲಿ ತುಂಬಿಕೊಂಡಿರುವ ನಮ್ಮ ಜೀವನ ಒಂದು ತತ್ತಿಯ ಅವಸ್ಥೆಯಲ್ಲಿದೆ. ಅದು ಪಕ್ವವಾಗಿ, ಪಕ್ಷಿಯಾಗಿ ಹೊರ ಬೀಳುವುದೇ ನಾಳಿನ ಉದ್ಭವ'' ಎಂಬ ಭಾವ ಸಂದರ್ಭ ಬೇಂದ್ರೆ ಬರೆದದ್ದು. ನಾಳಿನ ಉದ್ಭವ ಚಿಂತನೆ- ಶ್ರೀ ಅರವಿಂದರ ಮಾರ್ಗದರ್ಶನದಲ್ಲಿ ಬೇಂದ್ರೆ ಅನುಸರಿಸಿದ ನವಅಧ್ಯಾತ್ಮಮಾರ್ಗ.

ಈಗ ನಾವು ಬಾಳುತ್ತಿರುವುದು ೭ನೆಯ ಮನ್ವಂತರದಲ್ಲಿ. ಇದರ ಮನು-ವಿವಸ್ವಾನ್. ಇನ್ನೂ ೭ ಮನ್ವಂತರ ಮುಂದಿವೆ. ಈ ಮನ್ವಂತರದಲ್ಲಿ ಮಾನವ ಉದ್ಭವಸಾಧನೆ ಮಾಡಿದರೆ, ಮಾನವೀಯ ಮನ್ವಂತರ=ನವ ಕೃತಯುಗಾಗಮನಕ್ಕಾಗಿ ಪೂರ್ವ ಸಿದ್ಧತೆ ಆದೀತು ಎಂಬ ನಂಬಿಗೆ ಬೇಂದ್ರೆಯವರದು. ಆದುದರಿಂದ ಬೆಂದ್ರೆ ಪ್ರಾರ್ಥಿಸುತ್ತಾರೆ-

''ಜೀವದೀ ತತ್ತಿಯಲಿ
ದೇವನೆಂಬೀ ಹಕ್ಕಿ
ಕಾವನುಣ್ಣುತ ಕಾದುಕೊಂಡೆ ಇಹುದು
ತಂದೆ ಹಕ್ಕಿಯ ಕರೆಗೆ
ತಾಯಿ ರೆಕ್ಕೆಯ ಮರೆಗೆ
ಬಾಯಿದೆರೆದೋಂಕರಿಸಿ ಬೇಗ ಬಹುದು.''

''ಫಲದ ಹೊಟ್ಟೆಯ ಬೀಜ
ನೆಲದ ಬಸಿರೊಳು ನಾಟ
ಮರ ಬೆಳೆದು ಹಣ್‌ಬಿಟ್ಟು ಎರಗುವಂತೆ
ದಿವ್ಯ ಮನ್ವಂತರದ
ಭವ್ಯತೆಯ ಉದಯದಲಿ
ಗುರುವೆ! ಅವತರಿಸೆನ್ನ ಹೃದಯದಲ್ಲಿ.''

- ಜೀವದ ತತ್ತಿ

ಎ. ಈ. ಸಾಕ್ಷಿ ತತ್ತ್ವ ಅರಿತಿದ್ದರು. ಶ್ರೀ ಅರವಿಂದರು Psychic Being=ಚೈತ್ಯಪುರುಷ ವಿವರಿಸಿ, ಇದರೊಡನೆ ಜೀವಾತ್ಮಕ್ಕಿರುವ ಸಂಬಂಧವನ್ನು -

"It is the central being above the evolution that we call the jivatma; the psychic being is the same in evolution, it is a spark of the Divine there growing within to its full divinity as a portion of the Divine"-ಈ ಭವ್ಯ ಜೀವನವು ದಿವ್ಯಜೀವನವಾಗಲು ಚೈತ್ಯಪುರುಷ- ''ಸಾಕ್ಷಿ ಪುರುಷನಕ್ಷಿಯಲ್ಲಿ ಪ್ರತ್ಯಕ್ಷ ರಚಿಸಿದಾಕೆ''- ಗಾಯತ್ರಿ ಸೂಕ್ತ-ಬೇಂದ್ರೆ ರಚನೆಯಲ್ಲಿ ವಿವರಣೆ ಇದೆ. ಬ್ರಹ್ಮ ಎಂಬುದು ಅದ್ವೈತ. ಇದು ತಿಳಿಯಲು ಅಧ್ಯಾತ್ಮ ಸಾಧನೆಯಿಂದ ಆತ್ಮಜ್ಞಾನ ಆಗುವುದು ಅವಶ್ಯ. ಇದು Spirit ದ ಉಪಾಸನೆ. ಇದನ್ನು ಅಂಗುಷ್ಠಮಾತ್ರ ಪುರುಷಜ್ಞಾನ ಎಂದು ಸತ್ಪುರುಷರು ಕಂಡಿದ್ದರು. ''ಪ್ರತಿಯೊಬ್ಬರಲ್ಲಿ ಅವರವರ ಜೀವನ ಚರಿತವನ್ನು

ತಾಟಸ್ಥ್ಯದಿಂದ (ಇದೇ ಸಾಕ್ಷಿಯ ನಿಲುವು) ನೋಡುವ ಒಂದು ತನ್ಮಯ ನಯನವಿದೆ. ಈ ನಯನದ ಸುಳುವು ಹೊಳವಿನ ಎಚ್ಚರ ಆಗೀಗ ಮಿಂಚಿ ಹೋಗುವುದು'' ಎಂಬ ಭಾವ ಸಂಧರ್ಭದೊಂದಿಗೆ ಸಾಕ್ಷಿ ಕವನ ರಚಿಸಿದ್ದಾರೆ ಬೇಂದ್ರೆ. ಇಂದಿನ ರಾಜಕೀಯರು ಬಳಸುವ ಆತ್ಮಸಾಕ್ಷಿ ತಪ್ಪು ಪ್ರಯೋಗ. ಉನ್ಮನ ನಯನದ ಸಾಕ್ಷಿಯೆ ಸತ್ಯ. ಆಗ-

೧) ''ಅರಿವೆನು ಎನ್ನುವ ಮನದ ಪರಿವೆಯೇ
ಅಹುದೋ ಅಲ್ಲವೋ ಎನಿಸುತಿದೆ''

೨) ''ಬೆಳಕು, ಬಿಸಿಲು, ಬೆಳುದಿಂಗಳ ಇರುಳಿಗೆ
ಬೆಳೆಯುವದೇನೋ ಸಾಗುತಿದೆ''

೩) ''ಹೊಮ್ಮರ ಹೆಮ್ಮರ ಹಬ್ಬಿದೆ ಬಯಲಲಿ
ಪಾದಪ ಅಡಿಯಲಿ ಬಾಗುತಿದೆ''
(ಅತ್ತಿ, ಅರಳಿ, ಆಲ ವೃಕ್ಷಗಳು - ಪಾದಪಗಳು. ಇವುಗಳ ತಳದಲ್ಲಿ ವಿಪುಲ ನೀರಿನ ಸಂಚಯವಿರುತ್ತದೆ)

೪) ''ನಿಮ್ಮ ಕಣ್ಣು ರವಿ ಚಂದ್ರ ಬೆಳಗುತಿರೆ
ಜೀವಚುಕ್ಕೆ ನೆರವಾಗುತ್ತದೆ''

- ಸಾಕ್ಷಿ

ಇದು ಸಾಕ್ಷಿ. ನಾವು ನಮ್ಮನ್ನು ಪರೀಕ್ಷಿಸಿಕೊಳ್ಳುವ ಮಾರ್ಗದರ್ಶಕ ಚುಕ್ಕಿ, ಬೆಳ್ಳಿ!

''ಶಬ್ದಾರ್ಥ ಸಂಪೃಕ್ತಿ ಪಾರ್ವತಿ ಪರಮೇಶ್ವರರಂತೆ'' ಅರ್ಧನಾರಿನಟೇಶ್ವರರಂತೆ ಅವಿಭಾಜ್ಯ ಎಂದು ಕಾವ್ಯಶಾಸ್ತ್ರ ವರ್ಣಿಸುತ್ತದೆ. ಇಲ್ಲಿಯ ಪರಮೇಶ್ವರ, ಪಾರ್ವತಿ-ದೇವರು. ಈಶೋಪನಿಷತ್ತಿನಲ್ಲಿಯ ''ಈಶಾವಾಸ್ಯಂ ಇದಂ ಸರ್ವಂ'' ದಲ್ಲಿಯ ಈಶ, ದೇವರಲ್ಲ. ಅದು ಸರ್ವವ್ಯಾಪಿ ತತ್ತ್ವ. ಇದರ ಸಂಪೃಕ್ತಿ ಈಶೆ ಎಂಬ ಶಕ್ತಿಯೊಡನೆ. ಇದರ ಅರಿವು, ಜ್ಞಾನ-ಶಬ್ದಾರ್ಥಗಳಿಗೆ ಮೀರಿದ್ದು. ಭಾವಕ್ಕೆ ಮಾತ್ರ ಗಮ್ಯ. ಭಾವರೂಪ ತಾಳದೆ, ಈಶನ ಅರಿವು ಆಗದು. ಭಾವಜಾಗೃತಿ ಆಗದಿದ್ದರೆ ಈಶನ ಅರಿವು ಕೇವಲ ತನನನ=ಅರ್ಥವಾಗದ ಸಂಚಲನ ಮಾತ್ರ. ಈಶನ ವಾಸವು ಭಾವೋದ್ದೀಪಕ!

''ಕುರುಡುಗತ್ತಲುಳ್ಳ ನಾಡು
ಸೂರ್ಯನಿರದ ಕಪ್ಪುಗಾಡು
ತನ್ನ ಕೊಂದುಕೊಂಬ ಜನ.
ಭಾವವಿರದ ತನನನ.''

- ಈಶ

ಭಾವಜೀವಿಗೆ ಉದ್ಭವ ದರ್ಶನ ಸಾಧ್ಯ. ಭಾವ ಇಲ್ಲದಿರುವಿಕೆ ಆತ್ಮಹತ್ಯೆ- ಕುರುಡು ಪ್ರವಾಸ- ಅಂಧಕಾರ!

ಸಂಯಮಿಗೆ, ಜಾಗೃತ ವ್ಯಕ್ತಿಗೆ ಈಶನ ಅರಿವು ಪ್ರಕಾಶರೂಪದಿಂದ ಆಗುವುದು ಹೀಗೆ-

"ಇರುಳಿನಂಚಿಗೆ ಹಿಂಚಿಮುಂಚಿಗೆ
ನಲಿವ ಬೆಳ್ಳಿಯ ಬೆಳ್ಳಿಯೇ,
ಹೊತ್ತಿನೆಡಬಲ ಸುತ್ತಿ ತುಳುಕುವ
ಬೆಳಕು ಬೆಡಗಿನ ಬಳ್ಳಿಯೇ,
ಕತ್ತಲಾಚೆಗೆ ಇರುವ ಮಾಟವ
ಎಲ್ಲಿ ಕಲಿತೆಯೆ 'ಮಳ್ಳಿ'ಯೆ ?"

- ಬೆಳ್ಳಿ ಮೂಡಲಗಾಳ

ಈಶ ಪ್ರಕಾಶ ಸರ್ವವ್ಯಾಪಿ!

"..........................................

"""""""""""""""""""""""

...............................

ಹುಟ್ಟುಸಾವು ಎರಡು ಮೆಟ್ಟು
ಜೀವನಟನ ಆಟಕೆ.
ಜೀವನವಿದು ನಾಟ್ಯರಂಗ
ಭಾವರಸದ ಮಾಟಕೆ."

- ರಮ್ಯ-ಅಗಮ್ಯ

ಭಾವದಿಂದ ಪ್ರಪಂಚವನ್ನು, ಪರಮಾರ್ಥವನ್ನು ಅರ್ಥಮಾಡಿಕೊಳ್ಳುವುದು ಸಾಧ್ಯ. ಭಾವ ಜಾಗೃತಿ ಇರದವನಿಗೆ, ಹೊರಗಿನ ಪ್ರಂಪಂಚ ರಮ್ಯ ಇದ್ದೂ ಅಗಮ್ಯ ಮತ್ತು ಒಳಗಿನ ಪರಮಾರ್ಥವೂ ರಮ್ಯ ಮತ್ತು ಅಗಮ್ಯ.

ಪರಮಾತ್ಮನ ಸ್ವರೂಪವನ್ನು ಅಧ್ಯಾತ್ಮಮಾರ್ಗದವರು "ನಾದ, ಬಿಂದು, ಕಲಾತೀತನು" ಎಂದು ವರ್ಣಿಸಿದ್ದಾರೆ. ನಾದ=ಅನಾಹತ=ಓಂಕಾರ. ಬಿಂದು=ಬಿಂಬರೂಪ. ಮನಸ್ಸೆಂಬ ಕನ್ನಡಿಯಲ್ಲಿ-ಸುಪ್ರಮಾನಸ ಶಕ್ತಿಯ ಅವತರಣವಾದಾಗ ಪ್ರತಿಬಿಂಬರೂಪದಲ್ಲಿ ಬಿಂಬ ಕಾಣಲು ಸಾಧ್ಯ. ಚಂದ್ರನಿಗೆ ೧೬ ಕಲೆ. ಅವನ ಹಿಂದೆ ಇರುವ ೧೭ನೆಯ ಕಲೆ=ಕಲಾತೀತ ಕಲೆ-೧೭ ನೆಯದು. ಇದು ಜೀವನ ಕಲೆ. ಇದಕ್ಕೆ ಹುಣ್ಣಿವೆ ಮತ್ತು ಅಮಾವಾಸ್ಯೆ ಎಂಬ ಏರು, ಇಳಿವು ಇಲ್ಲ. ಇದರ ಬೆಳಕು ಶಾಶ್ವತ. ಇದೇ ಆತ್ಮಸಾಕ್ಷಾತ್ಕಾರ=ಸ್ವ+ರೂಪ ದರ್ಶನ.

ಬೇಂದ್ರೆಯವರಿಗೆ ಅಧ್ಯಾತ್ಮ ಶಾಸ್ತ್ರದ ಅರಿವಾಗಲು ಕನ್ನಡ ಭಾಷೆಯ ಸರ್ವನಾಮಗಳು ಯುಕ್ತ ಎನಿಸಿದವು. ಈ ಯುಕ್ತತೆ ಸಂಸ್ಕೃತ ಮತ್ತು ಇಂಗ್ಲಿಷ ಭಾಷೆಗಿಲ್ಲ. ಆದುದರಿಂದ ಅವರು ಆತ್ಮ ಎಂಬ ಸಂಸ್ಕೃತ ಶಬ್ದವನ್ನು ಆ+ತನು ಎಂದು ಒಡೆದರು. ಆ=ಕನ್ನಡ; ತನು=ಸಂಸ್ಕೃತ. ನಾನು, ನೀನು, ಅವನು (ಆನು), ತಾನು- ಎಲ್ಲವೂ ಕನ್ನಡ ಸರ್ವ ನಾಮಗಳು. ಇವುಗಳಲ್ಲಿ "ನು" ಎಂಬ ಅಕ್ಷರ ಮಧ್ಯವರ್ತಿ ಧಾತು. ಇದರ ಹಿಂದೆ ಹಚ್ಚುವ

ಅವ್ಯಯ- ನಾ, ನೀ, ಆ, ತಾ=ನಾನು, ನೀನು, ಆನು, ತಾನು ಎಂಬ ಉಪಸರ್ಗ ಶಬ್ದಗಳೇ ನಾಕುತಂತಿ!

"......................

...........

ತಾಽ ತನ್ನ ತಾನಿನಲ್ಲಿ

ತಾನೆ ತನ್ನ ತರುವನು

ಅವನು (ಆನು)

ನಾದ ಬಿಂದು ಕಲಾತೀತನು.

".................

............

ಆಽ ಶ್ರುತಿಯ ತತಿಯ ಗತಿಯ

ಹೀರಿ ಸೇರಿ ಇರುವನು

ಅವನು

ನಾದ ಬಿಂದು ಕಲಾತೀತನು."

- ಆ ತನು

ಈಶ, ಆತ್ಮ, ಪರಮಾತ್ಮಜ್ಞಾನ ಮಾಡಿಕೊಳ್ಳಲು ಹೊರಟಾಗ, ಮಾನವ ಜೀವನದಲ್ಲಿ ಅನೇಕ ವಾದಗಳ ಸೃಷ್ಟಿ ಆಯಿತು- ಪರಸ್ಪರ ವಿರುದ್ಧವಾದ=ವೈತಂಡವಾದ ಬೆಳೆದವು. ವಸ್ತು ಒಂದೇ; ಕಾಣುವ ಬಗೆ ಭಿನ್ನ. ಆದುದರಿಂದ "ವಿವಾದ ಎಂಬುದು ಪ್ರಳಯ; ಸಂವಾದ ಸೃಷ್ಟಿ" ಎಂದು ಬೇಂದ್ರೆ ನಿಶ್ಚಯಿಸಿದರು. ಸಂವಾದ-ಸಾತ್ವಿಕರ ಹಾದಿ; ವಿವಾದ-ತಾಮಸಿಗಳ ಮಾರ್ಗ.

"ಸಾತ್ವಿಕದ ಕನ್ನಡಿಗೆ ತಾಮಸವು ಮುಸುಕಿಹುದು

ಬಿಂಬಕ್ಕೆ ಪ್ರತಿಬಿಂಬ ಕಾಂಬುದಿಲ್ಲ

ನೋಟವಿಲ್ಲದಕಾಗಿ ಕಣ್ಣೆ ಕುರುಡೆನಿಸುವದು

ಇಹ ವಸ್ತು ತಾನು ಇಹೆನೆಂಬುದಿಲ್ಲ"

- ವೈತಂಡವಾದ

ಈ ವಸ್ತುವಿನ ದರ್ಶನ ಪ್ರತಿಯೊಬ್ಬರ ಹೃದಯಕಮಲದಲ್ಲಿ ಸಾಧ್ಯ.

"ಭೌತಿಕದ ರಂಗದಲಿ ನಾನೆ ನಾನಾಗಿ।

ಹೃದಯವಿಷ್ಟರದಲ್ಲಿ ಅಧಿಯಜ್ಞನಾಗಿ॥"

- ಹೃದಯ ಪುಂಡರೀಕ

ಈ ಅಧಿಯಜ್ಞನೇ ಕಲಿಯುಗದಲ್ಲಿಯ-ಪತಿತರನ್ನು ಪಾವನಗೊಳಿಸಲು ಅವತರಿಸಿದ ವಿಠ್ಠಲ! ಈ ದೈವತದ ಆರಾಧನೆ, ಕರ್ನಾಟಕ ಮತ್ತು ಮಹಾರಾಷ್ಟ್ರದ ಸಂಬಂಧ ಸೂತ್ರ! ಮರ್ಮಸ್ಥಳ! ಅಂತಃಕರಣದ ಸಂಗಮ!

ಪ್ರತಿಯೊಬ್ಬರ ಜೀವನಕ್ಕೆ ಅವರವರ ಜೀವನದ ಸೂತ್ರಧಾರನಿರುತ್ತಾನೆ. ಅದೇ ದೈವಕೃಪೆ. ಪೂರ್ವಜನ್ಮದ ಸಂಚಿತ ಕರ್ಮ ಸವಿಯದೆ, ಆತ್ಮಸಾಕ್ಷಾತ್ಕಾರವಿಲ್ಲ ಎಂಬುದನ್ನು ಕವನ ೩೫ (ನನ್ನದಿರಲಿ ನಿನ್ನದಿರಲಿ) ವರ್ಣಿಸುತ್ತದೆ.

ಜೀವನ ಕಲೆ (Art of Living)ಯ ಮಾರ್ಗ ಲಭಿಸಿದರೆ ಉಳಿದೆಲ್ಲ ಆರು ಕಲೆಗಳ - ಸಂಗೀತ, ನೃತ್ಯ, ನಾಟಕ, ಚಿತ್ರ, ಸಾಹಿತ್ಯ, ಶಿಲ್ಪ - ಅಂತರಾರ್ಥದ ಬೋಧವಾಗುತ್ತದೆ. ಎಲ್ಲದರ ಗುರಿ-ಆತ್ಮಸಾಕ್ಷಾತ್ಕಾರ; ಮಾರ್ಗ-ಕಲೋಪಾಸನೆ.

''ಕಿವುಡಿ ನರ್ತಕಿಯು ಕುಣಿಯೆ, ಬಾರಿಸುವ
ಕುರುಡು ಹಾಡುಗಾರ
ಅಂಗ-ಭಂಗಿ-ಲಾವಣ್ಯ ಬಣ್ಣಿಸುವ
ಮೂಕ ಚಿತ್ರಗಾರ.''

- ಸೃಷ್ಟಿ

ಎಂಬಲ್ಲಿ-ನೃತ್ಯಕ್ಕೆ-ಕಿವುಡುತನ. ಸಂಗೀತ ಗಾಯನಕ್ಕೆ-ಕುರುಡುತನ; ನಟನಿಗೆ, ಚಿತ್ರಗಾರನಿಗೆ-ಮೂಕತನ ಅಡ್ಡಿಯಾಗವು. ಅಂಗವಿಕಲತೆ ಅಧ್ಯಾತ್ಮಸಾಧನೆಗೆ ಅಡ್ಡಿಯಲ್ಲ ಎಂದು ಬೇಂದ್ರೆ ಪ್ರತಿಪಾದಿಸಿದ್ದಾರೆ. ಶಿಲ್ಪ ಮತ್ತು ಸಾಹಿತ್ಯ ಸೃಷ್ಟಿಗೆ ಕಣ್ಣು ಕಿವಿ, ಬಾಯಿ ಬೇಕು. ಆದರೆ ಇವೇ ಅಧ್ಯಾತ್ಮ ಸಾಧನೆಗೆ ಅಡ್ಡಿಯಾಗುತ್ತವೆ. ಇವರೆಲ್ಲರಿಗೂ ಬಾಹ್ಯ ಸೃಷ್ಟಿಯೇ ಗುರು, ಮೌನಿ! ಸೃಷ್ಟಿಯ ವಿವಿಧ ಅಭಿವ್ಯಕ್ತಿ-ಕಲಾ ಪ್ರಪಂಚ.

ಮೂರು, ನಾಲ್ಕು ಮತ್ತು ಆರನೆಯ ವಿಭಾಗದ ಕವನಗಳ ವಿಶ್ಲೇಷಣೆ ಡಾ|| ಕೆ. ಎಸ್. ಶರ್ಮಾ ಮುಂದಿನ ಪುಟಗಳಲ್ಲಿ ಮಾಡಿದ್ದಾರೆ. ಐದನೆಯ ವಿಭಾಗದಲ್ಲಿ (೧) ಹಾ! ಸರು (೨) ಜೀವಾಳದ ಆಸೆ (೩) ಟೊಂಕದ ಮೇಲೆ ಕೈ ಇಟಗೊಂಡು (೪) ಗೆಳತಿ ಎಂಬ ನಾಕು ಗೇಯ ಭಾವಗೀತಗಳಿವೆ. ಭಾವಸಂದರ್ಭದ ಟಿಪ್ಪಣಿಯಿಂದ ಭಾವಜಾಗೃತಿ ಸಾಧ್ಯ.

ಕ್ರಿ.ಪೂ. ೨ ರಿಂದ ಕ್ರಿ. ಶ. ೧೯೫೦ರ ವರೆಗೆ ತಮ್ಮ ಮೇಲಾದ ಸಂಸ್ಕಾರಗಳನ್ನೆಲ್ಲ ''ಮುಕ್ತಕಂಠ''ದಿಂದ ಬೇಂದ್ರೆ ವಿವರಿಸಿದ್ದಾರೆ. ಸನಾತನ ಸಂಪ್ರದಾಯದ ಆಧ್ಯಾತ್ಮಿಕತೆ ಬೇಂದ್ರೆಯವರದಲ್ಲ. ಪ್ರತಿನಿತ್ಯದ ತನ್ನ ಜೀವನ ಮತ್ತು ಸುತ್ತುಮುತ್ತಲಿನ ಜೀವನದ ನಿರೀಕ್ಷಣೆ ಮಾಡಿ, ನವಮಾನವೀಯ ಆವಿರ್ಭಾವಕ್ಕಾಗಿ ಮನುಷ್ಯ ಮಾಡಿಕೊಳ್ಳಬೇಕಾದ ಸಿದ್ಧತೆಗಳನ್ನು ಅತ್ಯಂತ ಮಾರ್ಮಿಕವಾಗಿ ವರ್ಣಿಸಿದ್ದಾರೆ. ಇವುಗಳ ಅಭ್ಯಾಸದಿಂದ ಮುಕ್ತಚಿಂತನ, ಮನನ, ನಿದಿಧ್ಯಾಸ ಆರಂಭವಾಗಿ, ಸಹೃದಯರು ಆನಂದಪಡುವಂತಾಗಲಿ ಎಂಬುದೇ ಈ ಭೂಮಿಕೆಯ ಪ್ರಮುಖ ಆಶಯ.

ಡಾ|| ವಾಮನ ಬೇಂದ್ರೆ
ಸಹ ನಿರ್ದೇಶಕರು
ವರಕವಿ ಡಾ|| ದ. ರಾ. ಬೇಂದ್ರೆ
ಸಂಶೋಧನ ಸಂಸ್ಥೆ ಹಾಗೂ ಬೇಂದ್ರೆ ಸಂಗೀತ ಅಕಾಡಮಿ.

''ಬೇಂದ್ರೆ ಕುಟೀರ'',
ಹುಬ್ಬಳ್ಳಿ - ೩೦
೧೮-೫-೨೦೦೬

ಕಾರ್ಯಸ್ಥಳ : ''ಬೇಂದ್ರೆ ಕುಟೀರ'', ವಿಶ್ರಮ ಚೇತನ, ಗೋಕುಲ ರಸ್ತೆ ಹುಬ್ಬಳ್ಳಿ-೫೮೦ ೦೩೦. ದೂರವಾಣಿ : ೨೩೩೦೪೬೬

# ಕಂಠ ಮತ್ತೆ ಮುಕ್ತವಾಗುವ ಮುನ್ನ

ವರಕವಿ ದತ್ತಾತ್ರೇಯ ರಾಮಚಂದ್ರ ಬೇಂದ್ರೆಯವರಿಗೆ ಕೇಂದ್ರ ಸಾಹಿತ್ಯ ಅಕ್ಯಾಡೆಮಿ ಗೌರವವನ್ನು ದೊರಕಿಸಿದ ಕೃತಿ ''ಅರಳು ಮರಳು''. ಇದು ಬೇಂದ್ರೆಯವರ ಪಂಚ ಕವನಗಳ ಗುಚ್ಛವಾಗಿ ಪ್ರಕಟಗೊಂಡಿತ್ತು; ಬೇಂದ್ರೆಯವರ ಅರವತ್ತು ವರುಷಗಳ ಸಂಪೂರ್ತಿಯ ಮಹಾ ಸಂಧಿಕಾಲದಲ್ಲಿ ಈ ಮಹಾಕವಿಯ ಪಂಚಕವನಸಂಕಲನಗಳ ಗುಚ್ಛವನ್ನು ಪ್ರಕಟಿಸುವ ಮೂಲಕ, ಅವರ ಅಪ್ರತಿಮ ಪ್ರತಿಭೆಯ ಪಂಚಜ್ಞಾನಗಳನ್ನು ಬೆಳಕಿಗೆ ತರಲಾಗಿತ್ತು. ಒಂದು ದೃಷ್ಟಿಯಲ್ಲಿ 'ಅರಳು ಮರಳು' ಕೃತಿಗೆ ಕೇಂದ್ರ ಸಾಹಿತ್ಯ ಅಕ್ಯಾಡೆಮಿ ಪ್ರಶಸ್ತಿ ನೀಡುವ ಮೂಲಕ, ಈ ಮಹಾಕವಿಗೆ ಸಾಂಕೇತಿಕವಾಗಿ ಪಂಚಾರತಿಯನ್ನು ಎತ್ತಿ ಭಾರತಿಯು ಆರದೀ ಆರತಿಯ ಶುಭಾಶೀರ್ವಾದ ಮಾಡಿದಂತಾಗಿತ್ತು ಎನ್ನಬೇಕು. ಈ ಪಂಚಕವನ ಸಂಕಲನಗಳಲ್ಲಿ ಒಂದು ''ಮುಕ್ತಕಂಠ'' ಎಂಬ ಕಾರಣಕ್ಕೆ, ಈ ಸಂಕಲನಕ್ಕೆ ವಿಶೇಷ ಮಾನ್ಯತೆ ಬರುತ್ತದೆ. ಈ ಕೃತಿಯ ಮುನ್ನುಡಿಯಲ್ಲಿ ಬೇಂದ್ರೆಯವರೇ ಹೇಳುವ ಹಾಗೆ ''ಮುಕ್ತಕಂಠ''ದಿಂದ ಬರುವ ಬಿಚ್ಚು ನುಡಿಗಳನ್ನು ವಿವಿಧ ನಯದಲ್ಲಿ ರೂಪಿಸಿದ್ದಾಗಿದೆ''. ಇಲ್ಲಿಯ ಕವನಗಳು ಅಂಬಿಕಾತನಯನ ಬಿಚ್ಚು ನುಡಿಗಳು; ಅವು ಮುಚ್ಚು ಮರೆಯಿಲ್ಲದೆ ಕವಿಯ ಅಂತರಾಳದಿಂದ ಹೊಳೆದು ಹರಿದಿವೆ ಎಂದೇ ಹೇಳಬೇಕಾಗುತ್ತದೆ. ''ಮುಕ್ತಕಂಠ'' ಕವನದಲ್ಲಿ ಅವರೇ ಹೇಳುವ ಹಾಗೆ :

''ಬಂದ ಮಾತ ಅಂದುಬಿಡುವೆ
ನಡೆವ ಮಾತ ನೋಡಿಬಿಡುವೆ
ಆಡಿಬಿಡುವೆ ಹಾಗೆ ಬಿಡುವೆ
ನಿಲ್ಲಗೊಡೆನು ನಡುವೆ ನಡುವೆ.''

''ಹರಿವ ಬಾಳ ತಡೆವುದೇಕೆ
ಬಿಟ್ಟ ಹಾದಿ ಹಿಡಿವುದೇಕೆ ?
ನೆಲದ ನೀರಿನಾಟವೆಲ್ಲ
ಬೆಳಕಿನೋಟ-ನೋಟದೊಡನೆ.''

ಎಲ್ಲೂ ನಡುವೆ ನಡುವೆ ನಿಲ್ಲಗೊಡದೆ, ಬಂದ ಮಾತು ಆಡಿಬಿಡುವುದಾಗಿ, ಹಾಗೆ ಬಿಡುವುದಾಗಿ ಬೇಂದ್ರೆ ನುಡಿದಿರುವುದು ಇವರ ''ಮುಕ್ತಕಂಠ''ದ ಬಗೆಯನ್ನು ಸಾಕ್ಷೀಕರಿಸುತ್ತದೆ. ಇದಲ್ಲದೆ ಇವರು 'ಹರಿವ ಬಾಳ ತಡೆವುದೇಕೆ' ಎನ್ನುತ್ತಾರೆ. ಈ ಅಭಿವ್ಯಕ್ತಿಯನ್ನು 'ನೆಲದ ನೀರಿನಾಟವೆಲ್ಲ, ಬೆಳಕಿನೋಟ ನೋಟದೊಡನೆ' ಎಂದು ಬಣ್ಣಿಸಿದ್ದಾರೆ. ನೆಲದ-ನೀರಿನ ಆಟ, ಬೆಳಕಿನೋಟ ಈ ಸಂಕಲನದ ಕವನಗಳಲ್ಲಿ ಮೂರ್ತರೂಪ ತಾಳಿವೆ. ಈ ನೋಟದಿಂದ ''ಮುಕ್ತಕಂಠ'' ಒಂದು ಅಮೂಲ್ಯ ಕೃತಿಯಾಗಿದೆ.

'ಸಂಪಾದಕರ ಭೂಮಿಕೆ'ಯಲ್ಲಿ ಡಾ|| ವಾಮನ ಬೇಂದ್ರೆಯವರು ''ಮುಕ್ತಕಂಠ''ದ ಕವನಗಳನ್ನು ಆರು ವಿಭಾಗಗಳಲ್ಲಿ ವರ್ಗೀಕರಿಸಿ, ಅವುಗಳಲ್ಲಿಯ ಮೂರು, ನಾಲ್ಕು ಮತ್ತು ಆರನೆಯ ವಿಭಾಗದ ಕವನಗಳ ವಿಶ್ಲೇಷಣೆಯನ್ನು ನನಗೆ ಒಪ್ಪಿಸಿದ್ದಾರೆ. ಒಂದು ಎರಡು ಮತ್ತು ಐದನೆಯ ವಿಭಾಗವನ್ನು ಸಂಪಾದಕರೇ ಅರ್ಥಗರ್ಭಿತವಾಗಿ ವಿವರಿಸಿದ್ದಾರೆ, ಹೀಗಾಗಿ ಇಲ್ಲಿಯ ಅನುಸಂಧಾನವನ್ನು

ನಾನು ಈ ಮೂರು ವಿಭಾಗಗಳಿಗೆ ಸೀಮಿತಗೊಳಿಸುತ್ತೇನೆ.

## ೩ನೆ ವಿಭಾಗ

### ಬೇಂದ್ರೆಯವರು ಸೃಷ್ಟಿಸಿದ ಗೆಳೆಯರ ಗುಂಪು, ಮೌನವಾರ ಆಚರಿಸಿ, ಪಡೆದ ಅನುಭಾವವನ್ನು ವರ್ಣಿಸುತ್ತದೆ - ಇಂಥ ೪ ಕವನಗಳು ಇಲ್ಲಿವೆ.

ಬೇಂದ್ರೆಯವರು ಸೃಷ್ಟಿಸಿದ ಗೆಳೆಯರ ಗುಂಪು, ಮೌನವಾರ ಆಚರಿಸಿ, ಪಡೆದ ಅನುಭಾವವನ್ನು ವರ್ಣಿಸುವ ನಾಕು ಕವನಗಳು ಈ ಸಂಕಲನದಲ್ಲಿ ಸೇರ್ಪಡೆಯಾಗಿವೆ. ಇವುಗಳ ವಿಶ್ಲೇಷಣೆಯಲ್ಲಿ ತೊಡಗುವ ಮುನ್ನ "ಗೆಳೆಯರ ಗುಂಪು" ಕುರಿತು ಕೆಲ ಪರಿಚಯಾತ್ಮಕ ಮಾತುಗಳನ್ನು ಹೇಳುವ ಅವಶ್ಯಕತೆ ಇದೆ. "ಗೆಳೆಯರ ಗುಂಪು" ಕನ್ನಡ ಸಾಹಿತ್ಯಕ್ಕೆ ಅರ್ಪಿಸಿದ ಕಾಣಿಕೆ, ಸಲ್ಲಿಸಿದ ಸೇವೆ ಅಮೂಲ್ಯವಾದದ್ದು. ಕರಾರು ರಹಿತವಾಗಿ ಗೆಳೆಯರು ಒಂದೆಡೆ ಕೂಡಿ, ರಸಕ್ಕೆ ರಸ ಕೊಡೋದು, ಸಮರಸವೇ ಜೀವನವೆಂಬ ಮೌಲ್ಯವನ್ನು ಅರಿಯುವುದು, ಸಾರುವುದು. ಈ ಬಗ್ಗೆ ಒಲವಿದ್ದವರು ದ. ರಾ. ಬೇಂದ್ರೆ ಮಾತೃಬಳ್ಳಿಯ ಸುತ್ತಲೂ ಕೂಡಿಕೊಂಡರು. ಪೂನಾದಲ್ಲಿ ಬೇಂದ್ರೆ ಹಾಗೂ ಖಾನೋಳ್ಕರ ಸ್ಥಾಪಿಸಿದ್ದ 'ಶಾರದಾ ಮಂಡಳ'ದಲ್ಲಿಯ ಮಿತ್ರೋಪಾಸನೆಯ ಬೇರು ಬಿಟ್ಟ ಈ 'ಗೆಳೆಯರ ಗುಂಪಿನ ಬಳ್ಳಿ' ಧಾರವಾಡದಲ್ಲಿ ಬೆಳೆಯಲು ಪ್ರಕಟಿಸಿತು. ೧೯೧೩ರಲ್ಲಿ ಗೆಳೆಯರ ಗುಂಪಿನ ಬೀಜ ಪೂನಾದಲ್ಲಿ ಭಾವನಾತ್ಮಕ, ಭೌತಿಕ ಸ್ವರೂಪ ತಾಳಿತು. ಬೇಂದ್ರೆಯವರು ಧಾರವಾಡದ ವಿಕ್ಟೋರಿಯಾ ಹೈಸ್ಕೂಲಿನಲ್ಲಿ ಶಿಕ್ಷಕರಾದಾಗ ಗೆಳೆಯರ ಗುಂಪಿಗೆ ಒಂದು ರೂಪ ಬಂತು. ಗೆಳೆಯರ ಗುಂಪಿನವರು "ಹಕ್ಕಿ ಹಾರುತಿದೆ" ಕವನ ಸಂಕಲನವನ್ನು ಪ್ರಸಿದ್ಧ ಮಾಡಿದ್ದು ೧೯೨೯ರಲ್ಲಿ. ಇದೇ ವರುಷದಲ್ಲಿ "ಜಯ ಕರ್ನಾಟಕ' ಪತ್ರಿಕೆಯನ್ನು ನಡೆಸಲು ಗೆಳೆಯರ ಗುಂಪು ತೆಗೆದುಕೊಂಡಿತು. ಧಾರವಾಡದ ಮನೋಹರ ಗ್ರಂಥ ಮಾಲಾ ಹಾಗೂ ಮಿಂಚಿನ ಬಳ್ಳಿಯ ಬೆಳವಣಿಗೆಗೆ ಕೂಡಾ ಗೆಳೆಯರ ಗುಂಪು ತನ್ನ ಸೇವೆಯನ್ನು ಸಲ್ಲಿಸಿತ್ತು. ಗೆಳೆಯರ ಗುಂಪು ಅಮೂಲ್ಯವಾದ, ಅಮೋಘವಾದ ಸಾಹಿತ್ಯಿಕ ಸೇವೆ ಸಲ್ಲಿಸಿದೆ. ಸಾಹಿತ್ಯ ಕ್ಷೇತ್ರಕ್ಕೆ ಅನೇಕ ದಿಗ್ಗಜರನ್ನು ಕಾಣಿಕೆಯಾಗಿ ಸಲ್ಲಿಸಿದೆ. "ಮೈತ್ರಿಗಾಗಿ ಕೂಡಿದಾಗ ಕೆಲಸ ಆಗ್ತದೆ" ಎಂಬ ಸೂತ್ರದ ಮೇಲೆ, 'ಸಮರಸವೇ ಜೀವನ' ಎಂಬ ಧೋರಣೆಗೆ ಅಂಟಿಕೊಂಡು ಸಾಹಿತ್ಯ ಇತಿಹಾಸದಲ್ಲಿ ಒಳಿದು ಹೊಸ ಮೈಲುಗಲ್ಲನ್ನು ನಿರ್ಮಿಸಿದ 'ಗೆಳೆಯರ ಗುಂಪು', ಮೌನವಾರಗಳನ್ನು ಆಚರಿಸುತ್ತಿತ್ತು. ಈ ಬಗ್ಗೆ "ಮುಕ್ತಕಂಠ"ದಲ್ಲಿ "ಮೌನವಾರ" ವನ್ನು ಕುರಿತು ಬರೆದ ಕವನ ಸೇರ್ಪಡೆಯಾಗಿದೆ. ಈ ಕವನಕ್ಕೆ ಭಾವ ಸಂದರ್ಭವನ್ನು ಬರೆದಿರುವ ಬೇಂದ್ರೆಯವರು ಈ ರೀತಿಯಾಗಿ ದಾಖಲಿಸಿದ್ದಾರೆ. "ಧಾರವಾಡ"ದ ಸಂವಾದ ಚತುರ ಮಿತ್ರರ ಸಹವಾಸದಲ್ಲಿ ಮಾಳಮಡ್ಡಿಯಲ್ಲಿ ಮೌನದಲ್ಲಿ ಕಳೆದಾಗ ಬರೆದುದು. ಮೌನದಲ್ಲಿ ಭಾಗವಹಿಸಿದ ಎಸ್. ಕೆ. ದೀಕ್ಷಿತ, ರಂ. ಶ್ರೀ. ಮುಗಳಿ, ವಿ. ಕೃ ಗೋಕಾಕ, ವಿನೀತ ರಾಮಚಂದ್ರರಾವ ಹಾಗೂ ಎಸ್.ಆರ್.ಮಳಗಿ ಇವರ ಹೆಸರುಗಳು ಕವನದ ಅಲಂಕಾರಗಳಾಗಿ ಸೇರ್ಪಡೆಗೊಂಡಿವೆ ಎಂದು.

'ಮೌನವಾರ'ಗಳ ಆಂತರ್ಯವನ್ನು ಈ ಕವನ ಸುಂದರವಾಗಿ ಚಿತ್ರಿಸುತ್ತದೆ :

"ಮಾತುಗಳಾಚೆಯ ವಿದೇಹಭಾವ
ಸದೇಹವಾಗಲು ತಪಿಸುತಿದೆ"

ಮೌನವನ್ನು ಆಚರಿಸುವಾಗ "ಮಾತುಗಳಾಚೆಯ ವಿದೇಹ ಭಾವವು ಸದೇಹವಾಗಲು

ತಪಿಸುತ್ತಿರುತ್ತದೆ''. ಎಂದಾಗ ಮೌನ ಹೇಗೆ ವಿದೇಹಭಾವಕ್ಕೆ ಸದೇಹ ರೂಪವನ್ನು ನೀಡಲು ತವಕಪಡುತ್ತದೆ ಎಂಬುದನ್ನು ಅಭಿವ್ಯಕ್ತಗೊಳಿಸುತ್ತದೆ.

ಮೌನದಲ್ಲಿ ಭಾಗವಹಿಸಿದ ಗೆಳೆಯರನ್ನು ಅಂಬಿಕಾತನಯನು ಹೇಗೆ ಬಣ್ಣಿಸುತ್ತಾನೆಯೆಂದು ನೋಡಿ :

''ಮೌನದ ಗೂಡಿನ ಹಕ್ಕಿಗಳು !
ಮಾತಿನ ಬಯಲಿನ ಚುಕ್ಕೆಗಳು !''

ಈ ಎಲ್ಲ ಗೆಳೆಯರೂ ''ಮಾತಿನ ಮಲ್ಲ''ರೇ ಆಗಿದ್ದು, ಈ ಮಾತಿನ, ಬಯಲಿನ ಚುಕ್ಕೆಗಳು'' 'ಮೌನದ ಗೂಡಿನ ಹಕ್ಕಿಗಳ' ಹಾಗೂ 'ಮಾತಿನ ಬಯಲಿನ ಚುಕ್ಕೆಗಳ' ಔಚಿತ್ಯವನ್ನು ಚಿತ್ರಿಸುತ್ತದೆ . ಅಂತೆಯೇ ಇವರು ಪ್ರಶ್ನಿಸುತ್ತಾರೆ :

''ಇವರೆಲ್ಲರು ನರಸಿಂಹರು ಆಗಿ
ಗರ್ಜಿಸುವರು ಎಂದು ?
ಎಂದೋ ಎಂದು ಮೌನವು ಕಾದಿ

ಈ ಮೌನಿಗಳು ನರಸಿಂಹರಾಗಿ ಎಂದು ಗರ್ಜಿಸುವರು? ಎಂಬುದು ಅಂಬಿಕಾತನಯನ ಪ್ರಶ್ನೆ. ಮೌನವನ್ನು ಆಚರಿಸುವುದೇ ಸಿಂಹಗರ್ಜನೆಯ ಸಿದ್ಧತೆಗಾಗಿ. ಮೌನವು ಕಾದಿಹುದು; ಅದು ಕಾದು ಕಾದು ಗರ್ಜಿಸುವುದು. ನುಡಿ-ನಡೆಗಳನ್ನು ಮೈಗೊಂಡು ಕ್ರಿಯೋನ್ಮುಖವಾಗುವುದು. ಇದುವೆ ಮೌನದ ಸಾಧನೆ-ಸಿದ್ಧಿ

'ಗೆಳೆಯರ ಗುಂಪು' ಆಚರಿಸುತ್ತಿದ್ದ ಮೌನವಾರಗಳ ಕಾಲದಲ್ಲಿ ಎಲ್ಲ ಗೆಳೆಯರೂ ರಚಿಸಿದ ಸಾಹಿತ್ಯ ಆಮೂಲ್ಯವಾದುದಾಗಿತ್ತು, ಇದಲ್ಲದೆ ಗೆಳೆಯರ ಗುಂಪಿನ ಗೆಳೆಯರು ಸಾಹಿತ್ಯ ಕ್ಷೇತ್ರದಲ್ಲಿ ಸಾಧಿಸಿದ ಸಾಧನೆ ಅಪಾರವಾಗಿತ್ತು ಅಗಾಧವಾಗಿತ್ತು. ಇಂಥ 'ಗೆಳೆಯರ ಗುಂಪು' ವಿಘಟನೆಗೊಂಡಾಗ ಆ ದುಃಖ ನುಂಗಿಕೊಂಡ ಅಂಬಿಕಾತನಯದತ್ತರಿಂದ ಹುಟ್ಟಿದ ಹಾಡು ''ಭಾವ ಗೀತ''. ಇದರಲ್ಲಿಯ ಈ ಕೆಳಗಿನ ನುಡಿ ಎಷ್ಟೊಂದು ಅರ್ಥಗರ್ಭಿತವಾಗಿದೆ ಎಂದು ಪ್ರತ್ಯೇಕಿಸಿ ಹೇಳಬೇಕಾಗಿಲ್ಲ.

''ಮಾತು ಮಾತು ಮಥಿಸಿ ಬಂದ ನಾದದ ನವಗೀತ
ಹಿಗ್ಗಿಬೀರಿ ಹಿಗ್ಗಲಿತ್ತು ತನ್ನ ತಾನೆ ಪ್ರೀತಾ
ಅರ್ಥವಿಲ್ಲ ಸ್ವಾರ್ಥವಿಲ್ಲ ಬರಿಯ ಭಾವಗೀತಾ
ಭೃಂಗದ ಬೆನ್ನೇರಿ ಬಂತು ಕಲ್ಪನಾ ವಿಲಾಸ''

ಗೆಳೆಯರ ಗುಂಪಿನ ವಿಘಟನೆಯಿಂದ ನೊಂದು-ಬೆಂದ ಬೇಂದ್ರೆ, ಅಂತರಂಗದ ಭಾವ ಗೀತೆಯಾಗಿ, ಭೃಂಗದ ಬೆನ್ನೇರಿ ಬಂದ ಕಲ್ಪನಾ ವಿಲಾಸ ಬರಿಯ ಭಾವಗೀತೆಯಾಗಿ ರೂಪುತಾಳಿತ್ತು ಎನ್ನುವುದು ಗಮನಾರ್ಹ ಸಂಗತಿ.

''ಬಿಡಿಮುತ್ತು''- ''ಉಗಾರ'' ಹಳ್ಳಿಯಲ್ಲಿ- ಸಂವಾದ ಚತುರ ಮಿತ್ರರ ಸಹವಾಸದಲ್ಲಿ, ಆದರೂ ಮೌನದಲ್ಲಿ ದಿನ ಕಳೆದಾಗ ಬರೆದುದು' ಎಂದು ಬೇಂದ್ರೆಯವರು ಈ ಕವನಕ್ಕೆ ಭಾವ ಸಂದರ್ಭದಲ್ಲಿ

ಬರೆದಿದ್ದಾರೆ. ಈ 'ಬಿಡಿಮುತ್ತು'ಗಳ ಮಾಲಿಕೆಯ ಕೊನೆಯ ನುಡಿ ಅತ್ಯಂತ ಮಾರ್ಮಿಕವಾಗಿದೆ :

ಆ ಕೃತಿಗು, ಈ ಕೃತಿಗು,
ತ್ರಾಸು ತಕ್ಕಡಿ ಹಿಡಿದು
ಪ್ರಾಸವಚನಗಳಿಂದ ತೂಗಬೇಡ.
ಕೃತ್ತಿಕೆಗು ಮೃತ್ತಿಕೆಗು
ಯಾರ ಹೋಲಿಕೆ ಬೇಕು ?
ಜೇಡ ಹುಳ ತಿಳಿಯದೇ
ಬಲೆಯ ಜಾಡ ?

ಈ ನುಡಿಮುತ್ತು ಯಾವುದೇ ಕೃತಿಯ ಮೌಲ್ಯಮಾಪನಕ್ಕೆ ಮಾರ್ಗದರ್ಶಕ ಸೂತ್ರದಂತಿದೆ. ವಿಮರ್ಶಕರು ತಮ್ಮದೇ ಮಾನದಂಡವನ್ನು ಹಾಕಿಕೊಂಡು, ಉತ್ತಮ ಕೃತಿಗಳನ್ನೂ ಹೀಗಳೆಯುತ್ತಾರೆ. ಇದು ಯೋಗ್ಯ ವಿಮರ್ಶೆಯಾಗಲಾರದು ಎಂಬ ಭಾವವನ್ನು ಅತ್ಯಂತ ಸೂಕ್ಷ್ಮವಾಗಿ ಬೇಂದ್ರೆ ಹೇಳಿದ್ದಾರೆ. ಪ್ರಾಸ ಇದೆಯೋ ಇಲ್ಲವೋ ಎಂದು ವಚನಗಳನ್ನು ತ್ರಾಸು ಹಿಡಿದು ತೂಗುವ ಕಾರ್ಯ ಯೋಗ್ಯವಲ್ಲ, ಯಾವುದೇ ಕವನವನ್ನು ಅದರ ಆಂತರಿಕ ಸೌಂದರ್ಯದಿಂದ ಅಳೆಯ ಬೇಕೇ ಹೊರತು, ಅದರ ಬಾಹ್ಯ ಛಂದೋಶೃಂಗಾರದಿಂದಲ್ಲ, ಕೃತ್ತಿಕೆಗು ಮೃತ್ತಿಕೆಗೂ ಯಾರ ಹೋಲಿಕೆಯೂ ಅವಶ್ಯವಿಲ್ಲ, 'ಕೃತ್ತಿಕೆ'ಯು ಚಾಂದ್ರಮಾನದ ಮೂರನೆಯ ನಕ್ಷತ್ರದ ಮಳೆ. ಇದನ್ನು ಯಾವುದಕ್ಕೆ ಹೋಲಿಸಲಾದೀತು? ಅಂತೆಯೇ 'ಮೃತ್ತಿಕಾ' ಪವಿತ್ರ ಭೂಮಿಗೆ ಯಾವ ಹೋಲಿಕೆ ಬೇಕು? ಅವುಗಳ ಸೊಬಗು ಸೊಗಸು ಪ್ರಕೃತಿಜನ್ಯ. ಅವುಗಳಿಗೆ ಹೋಲಿಕೆಯೂ ಇಲ್ಲ, ಅವುಗಳಿಗೆ ಬಾಹ್ಯ ಸೌಂದರ್ಯದ ಶೃಂಗಾರವೂ ಬೇಕಾಗಿರುವುದಿಲ್ಲ. ಜೇಡರಹುಳ ಬಲೆಯನ್ನು ತಾನೇ ಹೆಣೆಯುತ್ತದೆ; ಅದಕ್ಕೆ ಬಲೆಯ ಜಾಡ ತಿಳಿಯದೇ? ತಿಳಿದೂ ಅದು ಅದರಲ್ಲಿ ಬಂಧಿತವಾಗುತ್ತದೆ. ಇದು ಅದರ ಸಹಜ ಬಂಧನ. ಅಂತೆಯೇ ಸಹಜ ಸೃಷ್ಟಿಯ ಕೃತಿಗಳ ಅಂದ-ಚಂದ. ಈ 'ಬಿಡಿಮುತ್ತು' ಕವನವು ಹತ್ತು ಬಿಡಿಮುತ್ತುಗಳ ಒಂದು ಕವನ ಮಾಲೆ. ಒಂದೊಂದು ಮುತ್ತೂ ಸ್ವಯಂ ಪ್ರಭೆಯೇ ಸರಿ. ಇದಕ್ಕೆ ಇನ್ನೊಂದು ಉದಾಹರಣೆಯನ್ನು ನೋಡೋಣ.

"ಬಿಡಿ ಮಾತು
ಪವಣಿಸಿರೆ ಮೆರೆಯುವವು
ಒಲವುಗಂಪಿನ ನಾರುಸೂತ್ರದಲ್ಲಿ.
ಸ್ವರ್ಗೀಯ ಸಾರಸೌಂದರ್ಯವನು ಸವಿಯುವಾ
ಪಂಕಜದ ಪಾಂಗಿನಾ ನೇತ್ರದಲ್ಲಿ."

"ಮುದ್ರಿಸಿತು ಅಧರದಲಿ ;
ನಿದ್ರಿಸಿತು ಉದರದಲಿ,
ಮೂಡಿತ್ತು ತೊಡೆಯಲ್ಲಿ, ಮೂರ್ತಿಗೊಂಡು.
ತೋಳತೊಟ್ಟಿಲೊಳಾಡಿ
ಮಾತೃಗೀತವ ಹಾಡಿ
ಕೀರ್ತಿಪಡೆದಿತು ಜೀವ ಸ್ಫೂರ್ತಿಗೊಂಡು"

ಕವನ ಜನಿಸಿದಂತೆ ಅದರ ಉದರದಲ್ಲಿಯೇ ಜೀವಂತ ಮಮತೆಯ ಮಗುವಿನ ಜನನಕ್ರಿಯೆ ಒಡಮೂಡಿ, ತೊಳತೊಟ್ಟಿಲೊಳಾಡಿ, ಮಾತೃಗೀತವನ್ನು ಹಾಡಿ, ಕೀರ್ತಿ ಪಡೆದಿತು. ಜೀವ ಸ್ಫೂರ್ತಿಗೊಂಡು. ಅಧರದಲಿ ಮುದ್ರಿಸಿದ ಮುತ್ತು, ಉದರದಲ್ಲಿ ಪವಡಿಸಿ, ತೊಡೆಯಲ್ಲಿ ಮೂರ್ತಿಯಾಗಿ ಮೂಡುತ್ತದೆ. ಇದು ಎಂಥ ಚಮತ್ಕೃತಿ. ಬಿಡಿಮುತ್ತಿನ ಮಹತಿ:

''ಮೋಡದ ಮಳಿಗೆಗೆ ರವಿ ಕಾದಿದ್ದ'' ಇದು ಮೌನವಾರದ ಮತ್ತೊಂದು ಕವನ. ದಿ|| ಅಣ್ಣಾರಾಯರ ವ್ಯವಸ್ಥೆಯಲ್ಲಿ ಏರ್ಪಟ್ಟ 'ಉಗಾರ'ದಲ್ಲಿಯ ಇನ್ನೊಂದು ಮೌನವಾರದ ಫಲ, ಈ ಕವನ. 'ರವಿ ಕಾಣದ್ದನ್ನು ಕವಿ ಕಂಡ' ಎಂಬ ವಿಡಂಬನೆ ಚಮತ್ಕಾರಯುತ ಬಳಕೆ ಇಲ್ಲಿದೆ.

''ಒಮ್ಮೆಯಾದರೂ ಕವಿ ಕಾಣದುದನು
ರವಿ ಕಂಡೇನೆಂದು
ನಿಜವಾಗಿಯು ಕಾದಿದ್ದನು ಯುಗಯುಗ
ಆ ದಿನ ಬಂತೆಂದು''

''ತಪಸ್ವಿ ಕವಿಯನು ತಪತಪ ತೊಯ್ಸಿ
ತಾ ಕೆಡಬೇಕೆಂದು
ಮೋಡವ ಹಿಂಜಿ ಜನರಿಗೆ ಅಂಜಿ
ರವಿ ಅಡಿಗಿದನೆಂದು.''

''ಒತ್ತಕರಡಿನೊಲು ಬಾನದ್ದಿತ್ತು
ಮಶಿಗೊಣ್ಣೆಯವೊಲು ವನವೆದ್ದಿತ್ತು
ಕತ್ತಲೆ ಕಿರಿಕಿರಿ ಸಾಗಿತ್ತು
ಮೌನ ಇದ್ದೆ ಇತ್ತು.''

ರವಿ ಹಾಗೂ ಕವಿಯ ಕಣ್ಣುಮುಚ್ಚಾಲೆಯಂತೆ ನೂತಿದೆ ಈ ನೂತನ ಕವನ. ಮೋಡಮುಸುಕಿತ್ತು ಬಿಸಿಲು-ಮಳೆ ಸರಿ ಮದುವೆಯಾಗಿತ್ತು ಆದೇ ಹೊತ್ತಿಗೆ ಕವಿಯೂ ಎದ್ದು ಸುತ್ತಾಡಲು ಹೊರಟ. ಕವಿಯೆಡೆಗೆ ಕೊಡೆ ಇಲ್ಲದ್ದನ್ನು ಕಂಡು ರವಿ ಮಳೆಬಿಲ್ಲನೆಸೆದನು. ತಂಪಾದನು ಕವಿಯು. ಕವಿಯು ಒಳಒಳಗೇ ಮೌನದ ಮುದದಲ್ಲಿ ತಪಿಸುತ್ತಿದ್ದನು. ಈ ಸಮಯವನ್ನು ಕಾದು ರವಿ ಮೋಡದ ಹಿಂದೆ ಅಡಗಿದನು ಅಂಜಿ. ಒಮ್ಮೆಯಾದರೂ ''ಕವಿ ಕಾಣದ್ದನ್ನು ರವಿ ಕಂಡ''ನೆಂಬ 'ವಿಜಯದ ಹೆಮ್ಮೆ

ಮೌನವಾರದ ಈ ಮೂರು ಮುತ್ತುಗಳ ಬೆಡಗನ್ನು ನೋಡಿದಾಗ ''ಗೆಳೆಯರ ಗುಂಪು'' ಆಚರಿಸಿದ ಮೌನವಾರಗಳ ಮಹತಿ, ಆ ಸಮಯದಲ್ಲಿ ಸೃಷ್ಟಿಗೊಂಡ ಸಾಹಿತ್ಯದ ಸಿರಿಯ ಕಲ್ಪನೆ ಮೂಡಿ ಬರುತ್ತದೆ. ಈ ಮೌನವ್ರತವು ಗೆಳೆಯರ ಗುಂಪಿನ ಒಂದು ನವೀನ ಪ್ರಯೋಗವಾಗಿದ್ದಿತು. ಈ ಪ್ರಯೋಗದ ಅನುಭವಗಳು ಅಮೂಲ್ಯವಾಗಿದ್ದುವು. ಪ್ರತಿಯೊಬ್ಬರೂ ಅವರವರ ಕ್ಷೇತ್ರದಲ್ಲಿ ಪ್ರಖ್ಯಾತಿ ಪಡೆದರು.

## ೪ನೆಯ ವಿಭಾಗ

### ಬೇಂದ್ರೆಯವರ ವಿಶ್ವಚಿಂತನೆ, ಭಾರತ ಚಿಂತನೆ ಹಾಗೂ ಕರ್ನಾಟಕ ಚಿಂತನೆಯ ಕವನಗಳು - ಇಂಥ ೩ ಕವನಗಳು ಇಲ್ಲಿವೆ.

ಈ ಭಾಗದಲ್ಲಿ ಬೇಂದ್ರೆಯವರ ವಿಶ್ವಚಿಂತನೆ, ಭಾರತ ಚಿಂತನೆ ಹಾಗೂ ಕರ್ನಾಟಕ ಚಿಂತನೆಯ ಕವನಗಳನ್ನು ಆಸ್ವಾದಿಸೋಣ.

"ವಿಶ್ವ ಒಂದು ಅಶ್ವ" ಒಂದು ಸಂಕೀರ್ಣ ರಚನೆ. ಈ ಕವನಕ್ಕೆ ಭಾವ ಸಂದರ್ಭ ಹೀಗಿದೆ- "ದೃಶ್ಯ ವಿಶ್ವದ ಪಸರ ಜಗದ್ಗತಿಯಲ್ಲಿರುವ ಒಂದು ಅಶ್ವ. ಅದನ್ನೇರಿದ ನಮ್ಮ ಪ್ರಾಣ ಅಶ್ವಾರೋಹಿ. ಪ್ರಾಣವೂ ಅಶ್ವವಾದಾಗ, ಮನ ಅದನ್ನೇರುವುದು. ಮನವನ್ನು ಜ್ಞಾನ ಏರುವುದು. ಹೀಗೆ ಕುದುರೆಯ ಮೇಲೆ ಕುದುರೆ, ಅಶ್ವಾರೋಹಕನ ಮೇಲೆ ಅಶ್ವಾರೋಹಕ. ಹೀಗೆ ತರಗತಿಗಳಿವೆ." ಈ ಕವನದ ಎರಡನೆಯ ನುಡಿ ಹೀಗಿದೆ :

"ಉಸಿರು ಛಂದ ದೀರ್ಘಹ್ರಸ್ವ
ನನ್ನ ವಿಶ್ವ ಆತ್ಮದಶ್ವ
ಪ್ರಾಣವೇರಿದಂತೆ ಮನಾ
ಗುರುವೇರಿದ ತನ್ನತನಾ
ಕೈಮೈಗಳ ಗೈಮೆಯಲ್ಲಿ
ರೂಪಿಸುವದು ರೂಪಕಾ-
ತಿಳಿಯಬಹುದು ಹೋಳಿಯಬಹುದು
ಅಳಿಯಬಹುದೆ ಮಾಪಕಾ ?"

ಈ ನುಡಿಯಲ್ಲಿ ಗಮನಿಸಬೇಕಾದ ಪ್ರಮುಖಾಂಶಗಳು ಈ ರೀತಿಯಾಗಿವೆ. "ನನ್ನ ವಿಶ್ವ ಆತ್ಮದಶ್ವ" ಆತ್ಮದ ಅಶ್ವವೇ ನನ್ನ ವಿಶ್ವ ಎಂಬ ನವ ಪರಿಕಲ್ಪನೆಯನ್ನು ನೀಡುವುದರೊಡನೆ. ಪ್ರಾಣವೂ ಅಶ್ವವಾದಾಗ ಮನ ಅದನ್ನೇರುವುದೆಂದೂ, ಮನವನ್ನು ಜ್ಞಾನ ಏರುವುದೆಂದೂ ಪ್ರತಿಪಾದಿಸಿದ್ದಾರೆ. ಈ ರೂಪಕವು "ವಿಶ್ವ ಒಂದು ಅಶ್ವ" ಎಂಬ ಪರಿಕಲ್ಪನೆಯನ್ನು ಆಧರಿಸಿ, ಪ್ರಾಣ, ಮನ, ಜ್ಞಾನಗಳು ಕುದುರೆಯ ಮೇಲೆ 'ಕುದುರೆ' ಏರುವ ಸೋಪಾನವನ್ನು ರೂಪಿಸುತ್ತದೆ. ಇಲ್ಲಿಯ ಸಂದೇಶ "ಕುದುರಿ ಸಾಗು ಗುರಿಂಬಿಡದೇ ಕುರಿಯ ಬೇಡ ಎದೆತಡೆ............ನಡೇ ನಡೇ ನಡೇ" ಎನ್ನುವುದಾಗಿದೆ.

"ಕನ್ನಡದ ಕಮಳ" ಕವನವು ಕನ್ನಡದ ಅಷ್ಟಾಂಗಗಳಲ್ಲಿ ಒಂದೊಂದು ಶಕ್ತಿಯ ಕುರುಹು ಎಂದು ಬಿಂಬಿಸುತ್ತದೆ. ಈ ಕವನ ಹೀಗಿದೆ :

"ಕನ್ನಡದ ಕಮಳವದೊ ಅಷ್ಟದಳವಾಗಿಹುದು
ಕ್ಷೇತ್ರದಳ ಕ್ಷೇತ್ರಿದಳ ಜೀವದಳವು."

ಕನ್ನಡವನ್ನು ಅಷ್ಟದಳ ಕಮಳಕ್ಕೆ ಹೋಲಿಸಲಾಗಿದೆ. ಬ್ರಹ್ಮದಳ, ಶೇಷದಳ, ವಾಯುದಳ, ಕರ್ನಾಟದಳ, ದಾಸದಳ, ವತ್ಸದಳ, ಮಿತ್ರದಳ, ಮಾಧುರ್ಯದಳ- ಈ ಅಷ್ಟದಳಗಳು ಕಮಳದ ನಡುವಿನ ಭಾಗವಾದ ಕರ್ಣಿಕಾಮಧ್ಯದಲಿ. ಹಂಸವು ಎಚ್ಚೆತ್ತು ಈ ಕನ್ನಡದಕಮಳ ಪ್ರಕಾಶದ ಗರಿಗರಿ ಬಿಚ್ಚಿ, ನಿಮಿರಿ, ಚೈತ್ಯದಾಕಾಶದಲ್ಲಿ ನವಚತುರ್ದಳವನ್ನೂ ಮೀರಿ ಏರುತಿದೆ ಎಂದು ಬಣ್ಣಿಸಿದ್ದಾರೆ.

ಕನ್ನಡದ ಕಮಳದ ಕಾಂತಿ ಅತ್ಯದ್ಭುತವಾದುದಾಗಿದ್ದು ಅಷ್ಟ ಶಕ್ತಿಗಳನ್ನು ಮೈಗೂಡಿಸಿಕೊಂಡು ಹಂಸದೋಪಾದಿಯಲ್ಲಿ ಶಾಂತಿರಸವನ್ನು ಪ್ರೀತಿಯಿಂದ ಒಗ್ಗೂಡಿಸಿಕೊಂಡು ಮೆರೆಯುತ್ತಿದೆ ಎಂಬ ಈ ವರ್ಣನೆಯು 'ಜಗದೇಳಿಗೆಯಾಗುವದಿದೆ ಕರ್ನಾಟಕದಿಂದೆ' ಎಂಬ ಅಂಬಿಕಾತನಯದತ್ತರ ವಾಣಿಗೆ ಪೂರಕವಾಗಿ-ಪೋಷಕವಾಗಿ ಮೂಡಿ ಬಂದಿದೆ.

''ಅಶೋಕ ವೃಕ್ಷ'' ಕವನವು ಸ್ವಾತಂತ್ರ್ಯೋತ್ತರ ಭಾರತದ ಸ್ಥಿತಿ-ಗತಿಯ ಚಿತ್ರಣವಾಗಿದೆ. ಅಂಬಿಕಾತನಯದತ್ತರಿಗೆ ಅಶೋಕ ವೃಕ್ಷದ ನೆರಳಿನಲಿ ಸಶೋಕ ಸೀತೆಯು ಕಂಡಿದ್ದಾಳೆ; ಅಶೋಕ ಚಕ್ರದ ಧ್ವಜದಡಿಯಲ್ಲಿ ಸಶೋಕ ಜನತೆಯು ಕಾಣುತ್ತಿದೆ. ಬ್ರಿಟಿಷರ ಸಾಮ್ರಾಜ್ಯಶಾಹಿಯಿಂದ ಭಾರತ ವಿಮೋಚನೆಯನ್ನು ಪಡೆದ ಅನಂತರ, ರಾಷ್ಟ್ರದ ಸಂಕೇತವಾಗಿ ಅಶೋಕ ಚಕ್ರವನ್ನು ಅಳವಡಿಸಿಕೊಳ್ಳಲಾಯಿತು. ಈ ಅಶೋಕ ಚಕ್ರವೇ ರಾಷ್ಟ್ರಧ್ವಜದ ಮಧ್ಯದಲ್ಲಿ ರಾರಾಜಿಸುತ್ತದೆ. ಆದರೆ, ಅಶೋಕ ಚಕ್ರ ರಾಷ್ಟ್ರದ ಸಂಕೇತವಾದರೂ, ರಾಷ್ಟ್ರದ ಜನತೆ ಈ ಅಶೋಕ ಚಕ್ರದ ಅಡಿಯಲ್ಲಿ ಸಶೋಕರಾಗಿರುವುದು ಒಂದು ವೈರುಧ್ಯ ಹಾಗೂ ದುರಂತ. ಇದು ಅಶೋಕ ವೃಕ್ಷದ ಅಡಿಯಲ್ಲಿ ಕುಳಿತ ಸೀತೆ ಸಶೋಕದಲ್ಲಿ ನರಳುತ್ತಿದ್ದುದನ್ನು ನೆನಪಿಸುತ್ತದೆ. ಈ ಕವನ ಮೊದಲನೆಯ ನುಡಿ ಹೀಗಿದೆ :

''ಅಶೋಕವೃಕ್ಷದ ನೆರಳಿನಲಿ
ಸಶೋಕ ಸೀತೆಯ ಕಂಡಿದ್ದೆ.
ಅಶೋಕಚಕ್ರದ ಧ್ವಜದಡಿಗೆ
ಸಶೋಕ ಜನತೆಯ ಕಾಣುತಿಹೆ.''

ಇದು ರಾಷ್ಟ್ರಸ್ಥಿತಿಯ ಮಾರ್ಮಿಕ ಅಭಿವ್ಯಕ್ತಿ. ಇದರ ಮುಂದಿನ ನುಡಿ ಈ ಕೆಳಗಿನಂತಿದೆ :

''ವಿಶೋಕಗೊಳಿಸುವ ದಿವ್ಯಧ್ವನಿ
ಆಗಿನಂತೆ ಮೊಳಗುವದೀಗೂ.
ವಿಶೇಷವೆನಿಸುವ ಶ್ರದ್ಧೆಯಲಿ.
ಶುದ್ಧಿಯಿರಲಿ ನವಬುದ್ಧಿಯಲಿ''

ಸ್ವಾತಂತ್ರ್ಯಪೂರ್ವ ಕಾಲಘಟ್ಟದಲ್ಲಿ ಪರಕೀಯರ ಆಳ್ವಿಕೆಯಿಂದ ವಿಮೋಚನೆಗಾಗಿ ಹೋರಾಡಿದ್ದಾಗಿದ್ದರೂ, ಸ್ವಾತಂತ್ರ್ಯಾನಂತರ ರಾಷ್ಟ್ರದ ಜನರು ಸಶೋಕದಲ್ಲೇ ಇದ್ದಾಗ, ಶೋಕ ವಿಮೋಚನೆಗೆ ಹೋರಾಟವು ಅನಿವಾರ್ಯವಾಗುತ್ತದೆ. ಈಗಲೂ ''ವಿಶೋಕಗೊಳಿಸುವ ದಿವ್ಯಧ್ವನಿ ಆಗಿನಂತೆ ಮೊಳಗುವದೀಗೂ'' ಎಂದು ಕವಿವಾಣಿ ನುಡಿಯುತ್ತಿದೆ. ಆದರೆ ಈ ಶೋಕವಿಮೋಚನೆಯ ಹೋರಾಟಕ್ಕೆ ವಿಶೇಷ ಶ್ರದ್ಧೆ ಶುದ್ಧ ನವಬುದ್ಧಿಯ ಆವಶ್ಯಕತೆ ಇದೆ ಎಂಬ ಎಚ್ಚರ ಇಲ್ಲಿ ಕೊಡಲಾಗಿದೆ.

''ಹರಗೋಣ ಬಾ ಹೊಲ'' ಇದು ನವಕೃಷಿಕರ ಹಾಡಾಗಿ ಮೂಡಿ ಬಂದಿದೆ. ಸ್ವತಂತ್ರ ಭಾರತದಲ್ಲಿ ಕೃಷಿಕರಿಗೆ ನವ ಹಾಡನ್ನು ಬೇಂದ್ರೆ ನೀಡಿದ್ದಾರೆ. ''ಹರಗೋಣ ಬಾ ಹೊಲ ಹೊಸದಾಗಿ, ಬಿದ್ದದ ಹ್ಯಾಗೊ ಕಾಲ್‌ಕಸವಾಗಿ'' ಎಂಬ ಹೊಸ ಪಲ್ಲವಿಯನ್ನು ಹೊತ್ತು ಈ ಹಾಡು ಮೂಡಿದೆ. ಇಲ್ಲಿಯ ಕೆಲ ನುಡಿಗಳು ಹೀಗಿವೆ :

"ಬಿತ್ತಿದರು ಕಾಳು ಹನಿಹನಿಯಾಗಿ
ಬರ್‍ತಾಳ ತಾಯ್ ತೆನಿತೆನಿಯಾಗಿ
ನಂಬಿಗಿಲೆ ತುಂಬ್ಯsದ ನಮ್ಮ ಬಾಳು
ನಂಬಿಗಿಲೆ ಬಿತ್ತೋಣ ನಮ್ಮ ಕಾಳು."

"ನಂಬಿಗೀಲೆ ದುಡಿತಾನ ಬಸವಣ್ಣಾ
ನಂಬಿಗ್ಯಾಗೈತಿ ಅವನ ಕಸುವಣ್ಣಾ
ಕಸುವೀಲೆ ಬೆಳೆಸೋಣ ಎತ್ತಗೋಳು!
ಎತ್ತಲ್ಲ; ಅವು ನಮ್ಮ ಮುತ್ತಗೋಳು!"

ಎಷ್ಟೊಂದು ಸರಳವಾದ ಜಾನಪದಲಯದಲ್ಲಿ ಪ್ರಕೃತಿಯ ಸತ್ಯವನ್ನು ಬಿಂಬಿಸುವುದರೊಡನೆ, ಎಲ್ಲ ಉತ್ಪಾದನಾ ಪ್ರಕ್ರಿಯೆಗೂ ನಂಬಿಗೆಯ ಬಾಳು ಅತ್ಯವಶ್ಯವೆಂಬ ಸಂದೇಶವನ್ನು ಇಲ್ಲಿ ನೀಡಿದ್ದಾರೆ. ಹನಿ ಹನಿಯಾಗಿ ಕಾಳನ್ನು ಬಿತ್ತಿದರೆ, ಭೂಮಿತಾಯಿ ತೆನಿತೆನಿಯಾಗಿ ಫಸಲನ್ನು ನೀಡುತ್ತಾಳೆ. ಬಸವಣ್ಣನು ತನ್ನ ಕಸುವನ್ನು ಧಾರೆ ಎರೆದು ದುಡಿಯುತ್ತಾನೆ, ಆದರೆ ಆ ಬಸವಣ್ಣನನ್ನು ಕಸುವೀಲೆ ಬೆಳೆಸಬೇಕು. ಈ ಎತ್ತುಗೋಳು ಅವು ಮುತ್ತುಗೋಳು ಎಂದು ಬಣ್ಣಿಸುವ ಮೂಲಕ, ದುಡಿಯುವ ಎತ್ತು, ನಮ್ಮ ಬಸವಣ್ಣನಾದ್ದರಿಂದ, ಅದನ್ನು ಪ್ರೀತಿ-ಮಮತೆಯಿಂದ ಕಸುವೀಲೆ ಬೆಳೆಸೋಣ. ಆಗ ಆದೂ ಕಸುವಿನಿಂದ ದುಡಿಯುತ್ತದೆ ಎಂಬ ನವನೀತಿಯನ್ನು ನೀಡಿದ್ದಾರೆ. ಈ ಕವನದ ಕೊನೆಯ ನುಡಿ ಅತ್ಯಂತ ಮಾರ್ಮಿಕ ಸಂದೇಶವನ್ನು ನೀಡುತ್ತದೆ :

"ಹೊತ್ತಿಗ್ಯಾಗ ಬರಿ ಶಾಸ್ತ್ರದಾಧಾರ
ಕುತ್ತಿಗಿಮ್ಯಾಲೈತಿ ನೊಗಭಾರ
ನಂಬಿಗ್ಯಾಗ ಸೆಲೀತsದ ಬಲ ಎಲ್ಲಾ
ನಂಬಿಗೀನ ಸೋರಿದರ ಬಲ ಇಲ್ಲಾ"

ಹೊತ್ತಿಗೆ ನೋಡಿ ಕೃಷಿ ಮಾಡೋದು ತರವಲ್ಲ; ಕುತ್ತಿಗೆ ಮೇಲೆ ನೊಗಭಾರ ಹೊತ್ತು ದುಡೀಬೇಕು. ದುಡಿಮೆಯಲ್ಲಿ ನಂಬಿಕೆಯಿಟ್ಟವನ ಬಲ- ಸೆಲೆಯಂತೆ ನಿರಂತರ ವೃದ್ಧಿಯಾದರೆ ಫಲ ನಿಶ್ಚಿತ. ನಂಬಿಗೀನ ಸೋರಿಹೋದರೆ, ಬಲವೇ ಶೂನ್ಯವಾಗುತ್ತದೆ ಎಂಬ ನವ ಸಂದೇಶವನ್ನು ನೀಡಿದ್ದಾರೆ ಬೇಂದ್ರೆ.

೬ನೆಯ ವಿಭಾಗ

ವಾರಪತ್ರಿಕೆ, ನಿರ್ಮುಕ್ತಿಕಾ, ಪ್ರಾಣಿ, ಪರಿಸರ ಮತ್ತು ಜೀವನದಲ್ಲಿ ಹೋರಾಟದ ಮಹತ್ವ ಕುರಿತು ಕವನಗಳಿವೆ - ಇಂಥ ೪ ಕವನಗಳು ಇಲ್ಲಿವೆ.

ಈ ವಿಭಾಗದಲ್ಲಿ "ಇದು ವಾರಪತ್ರಿಕೆ", "ಈಚಲ ಮರದಮ್ಮ", "ಪ್ರಾಣಿಗಳು" ಹಾಗೂ "ಹೋರಾಡು ಹೋರಾಡು" ಈ ನಾಲ್ಕು ಕವನಗಳ ವಿಶ್ಲೇಷಣೆ ಮಾಡಲಾಗಿದೆ.

"ಇದು ವಾರಪತ್ರಿಕೆ" ಕವನದಲ್ಲಿ ಬೇಂದ್ರೆಯವರು ಸುದ್ದಿ ಮಾಧ್ಯಮಗಳು ಹೇಗೆ ಔಚಿತ್ಯವನ್ನು ಕಳೆದುಕೊಂಡು, ಕೇವಲ ಸೆನ್‌ಸೇಷನಲಿಸಮ್‌ಗೆ ಮಹತ್ವ ಕೊಡುತ್ತವೆ ಎಂಬುದನ್ನು ಚಿತ್ರಿಸಿದ್ದಾರೆ. ಈ ಕವನದ ಕೆಲ ಚರಣಗಳು ಈ ರೀತಿಯಾಗಿವೆ :

"ಇದು ವಾರಪತ್ರಿಕೆಯು! ಏನು ಇಲ್ಲಿಯ ಸುದ್ದಿ?
ಯಾರೊ ಸತ್ತರು! ಯಾರೊ ಎಲ್ಲೊ ಗೆದ್ದರು! ಯಾರೊ?
ಯಾಕೆ ಬಿದ್ದರೊ ಏನೊ? ಸಾಕು ಗಾಳಿಯ ಗುದ್ದಿ
..........................
...................................
ದಾನ ತಂದಳು ಎಂದು ಕೂಗಿದರು, ಆ ದುರುಗಿ

"ಕೊನೆಗೊಮ್ಮೆ ಅವನ ಸುದ್ದಿಯೆ ಬಂತು ಪತ್ರದಲಿ
ಉಳಿದವರ ಹಾಗೆ ಬಲಿಯಾದನಿವ ಸತ್ರದಲಿ."

ಎಲ್ಲವೂ ಅಸ್ಪಷ್ಟ, ಊಹಾಪೋಹ; ಗಾಳಿಯಗುದ್ದಿ ಅದನ್ನೇ ಸುದ್ದಿ ಮಾಡುವ ಪರಿಪಾಠ ಬೆಳೆದು ಬಂದಿದೆ. ಈ ಸುದ್ದಿ ಪ್ರಸಾರದ ವೃತ್ತ ಪತ್ರಿಕೆಗಳ ವ್ಯಂಗ್ಯೋಕ್ತಿ ಇದಾಗಿದೆ. ದುರಂತವೆಂದರೆ ಇಂದಿಗೂ ಸುದ್ದಿ ಪತ್ರಿಕೆಗಳು ಇದೇ ರೀತಿಯಾಗಿ ಕಾರ್ಯ ಮಾಡುತ್ತಿರುವುದು.

"ಈಚಲ ಮರದಮ್ಮ" ಹೆಂಡದ ಕುರಿತು ರಚಿಸಿದ ಕವನ ಇದಾಗಿದೆ :

"ಈಚಲ ಮರದಮ್ಮ
ಕರುಣಿಸು ನಮ್ಮ
ಕೆದರಿವೆ ಗರಿ ತಲೆ ತುಂಬಾ
ಜೊಲ್ಲಿಲೆ ತುಂಬಿದೆ ಕುಂಭಾ
ಮೊಸಳೆ ಮೆಯ್ಯ ಜಗದಂಬಾ-ಓ........."
"ಹೆಣವಾದೆವು ಹೆಂಡದಲ್ಲಿ
ಉರುವಲು ಬಾಳ್ಕೊಂಡದಲ್ಲಿ
ದನಬದುಕಿದು ತಂಡದಲ್ಲಿ-ಓ........"
..............................
..................................

"ಹೊರಗೆ ನಿಶೆ, ಒಳಗೆ ನಿಶೆ
ಕತ್ತಲೊ ಕಡಲೆಲ್ಲ ದಿಶೆ
ತೀರೀತೇ ಇಂಥ ದಶೆ-ಓ......."
.............................
..........................

"ಇಳಿ ಎದೆಯಲಿ ಹಾಲಾಗಿ
ಎಚ್ಚರಿರುವೆವು ಹಾಯಾಗಿ
ಬೆಲ್ಲವ ಕೊಡು ತಾಯಾಗಿ-ಓ.........
ಬದುಕಿಸು ನಮ್ಮ
ಈಚಲ ಮರದಮ್ಮ"

ಈ ಕವನದಲ್ಲಿ ಈಚಲ ಮರದದಮ್ಮನಿಗೆ ನಮ್ಮನ್ನು ಬದುಕಿಸು ಎಂಬ ಪ್ರಾರ್ಥನೆಯನ್ನು ಸಲ್ಲಿಸಲಾಗಿದೆ. ಹೆಂಡದಲ್ಲಿ ಹೆಣವಾಗುತ್ತ ಕುಡಿತದಿಂದ ಹೊರಗೆ ಒಳಗೆ ನಿಶೆಯಲಿದ್ದು, ಜೀವನವನ್ನೇ ಹಾಳು ಮಾಡಕೊಳ್ಳುತ್ತಿರುವ ಕುಡುಕರ ಮೇಲೆ ಕರುಣೆ ತೋರಿಸಿ, ಅವರ ಬಾಳನ್ನು ಬೆಳಗಿಸುವಂತೆ ಮಾಡೆಂದು ಸಲ್ಲಿಸಿದ ಪ್ರಾರ್ಥನೆ ಇದಾಗಿದೆ. ಈ ಕವನದ ಕೊನೆಯ ನುಡಿ ಅತ್ಯಂತ ಗಮನಾರ್ಹ. ಕವಿಯ ಪ್ರಾರ್ಥನೆಯು ಔಚಿತ್ಯಪೂರ್ಣವಾಗಿದೆ. ಈಚಲ ಮರದಮ್ಮನಲ್ಲಿ ಮಾಡುವ ಬಿನ್ನಹವೆಂದರೆ, ಎದೆಯಲಿ ಹಾಲಾಗಿ ಇಳಿ; ನೀನು ತಾಯಿ, ಕೊಡು ಬೆಲ್ಲವ; ಇದರಿಂದ ನೀನು ನಮ್ಮನ್ನು ಬದುಕಿಸುತ್ತೀಯ ಎಂದು. ಕೊಲ್ಲುವ ಈಚಲ ಮರದಮ್ಮ, ತಾಯಾಗಿ ಮಕ್ಕಳನ್ನು ಬದುಕಿಸುವ ಹೊಸ ಪಾತ್ರವನ್ನು ವಹಿಸಿದರೆ, ಅದು ಆಯಮ್ಮನ ತಾಯ್ತನಕ್ಕೆ ಭೂಷಣವಾದೀತು, ತಾಯ್ತನದ ಗೌರವ ಉಳಿದೀತು.

"ಪ್ರಾಣಿಗಳು" ಈ ಕವನವು ಮಾನವನ ಪ್ರಾಣಿತನದ ದರ್ಶನವಾಗಿ ಪ್ರಕಟಗೊಂಡು, ಅವನಲ್ಲಿ ಮಾನವತೆ ಮೆರೆಯಲಿ ಎಂಬ ಆಶಯದಿಂದ ಮುಕ್ತಾಯವಾಗುತ್ತದೆ. ಈ ಕವನದ ಕೆಲ ಚರಣಗಳ ಪರಿಚಯ ಇದರ ಗಂಭೀರತೆಯ ಕಲ್ಪನೆಯನ್ನು ತಂದೀತು.

"ಜಗದೊಳು ತುಂಬಿಹರೋ ಜನರು ।
ಹುಲಿಮಂಗನ ಸಂತತಿಯವರು ॥"

"ಬೆಕ್ಕಿನ ಜಾತಿಯ ತಿನಸಿಗರು ।
ಹಡೆದ ಬದುಕನೇ ತಿನುವವರು ॥"

ಜಗತ್ತಿನಾದ್ಯಂತ ಜನರು ತುಂಬಿದ್ದರೂ, ಅವರೆಲ್ಲರೂ ಹುಲಿ ಹಾಗೂ ಮಂಗನ ಸಂತತಿಯವರು ಎಂದು ಅವರನ್ನು ಕವಿ ಬಣ್ಣಿಸುತ್ತಾನೆ. ಎಲ್ಲ ಶಾಸ್ತ್ರಗಳೂ ಮಾನವನನ್ನು ಪ್ರಾಣಿಯೆಂದೇ ಬಣ್ಣಿಸುತ್ತವೆ. ಸಮಾಜಶಾಸ್ತ್ರ ಮಾನವನನ್ನು ಸಾಮಾಜಿಕ ಪ್ರಾಣಿ ಎಂದರೆ; ರಾಜ್ಯಶಾಸ್ತ್ರವು ಮಾನವನನ್ನು ರಾಜಕೀಯ ಪ್ರಾಣಿ ಎಂದು ಬಣ್ಣಿಸುತ್ತದೆ. ಹೀಗಾಗಿ ಮಾನವರನ್ನು ಪ್ರಾಣಿಗೆ ಹೋಲಿಸಿ, ಬಣ್ಣಿಸುವ ವರಕವಿ ಬೇಂದ್ರೆಯವರು ಜಗತ್ತಿನಲ್ಲಿಯ ಮಾನವರಲ್ಲಿ ಹುಲಿ, ಮಂಗ, ಬೆಕ್ಕಿನ ಜಾತಿಯವರು ತುಂಬಿರುವುದನ್ನು ಚಿತ್ರಿಸಿದ್ದಾರೆ. ಬೆಕ್ಕು ಹೇಗೆ ಹಡೆದ ಮರಿಗಳಲ್ಲಿ ಒಂದನ್ನು ತಿಂದು ಬಿಡುತ್ತಿದೆಯೋ ಹಾಗೆ ಮಾನವರಲ್ಲೂ ನರಭಕ್ಷಕರಿದ್ದಾರೆ. ಹುಲಿಯ ಜಾತಿಗೆ ಸೇರಿದ ಕ್ರೌರ್ಯವನ್ನು, ಮಂಗನ ಜಾತಿಯ ಚೇಷ್ಟೆಯುಳ್ಳ ಮಾನವರನ್ನು ಜಗತ್ತಿನ ತುಂಬ ಕಾಣಲಾಗುತ್ತದೆ. ಈ ದುಸ್ಥಿತಿಯನ್ನು ಹೋಗಲಾಡಿಸುವ ಅವಶ್ಯಕತೆಯನ್ನು ಕಂಡು ಕವಿ ನುಡಿಯುತ್ತಾನೆ :

"ಹುಲಿಕುಣಿತವು, ಮಂಗನ ಕಾಟ ।
ನಿಲ್ಲಲಿ ಇನ್ನೀ ಚೆಲ್ಲಾಟ ॥"

"ಬಿಸುಡಿರಿ ಈ ಮುಸುಕಿದ ಮೋಸ ।
ಹರೆದೊಗೆಯಿರಿ ಹಾಕಿದ ವೇಷ ॥"

"ಜನಮನದಲಿ ಜನಕತೆ ಹಿಗ್ಗಿ ।
ವೈದೇಹರ ಪ್ರಕೃತಿಯ ಸುಗ್ಗಿ ॥"

"ವರಿಸಲಿ ಆತ್ಮಾರಾಮತೆಯ ।
ಪ್ರೇಮದ ನವನಿಷ್ಕಾಮತೆಯ ॥"

ಹುಲಿಯ ಕುಣಿತ, ಮಂಗನ ಕಾಟ ಮುಂತಾದ ಚೆಲ್ಲಾಟ ನಿಲ್ಲಲಿ; ಮಾನವನು ಹಾಕಿದ ಪ್ರಾಣಿಯ ವೇಷವನ್ನು ಹರಿದೊಗೆಯಲಿ. ಅವನಲ್ಲಿ ಮುಸುಕಿದ ಮೋಸವನ್ನು ಅವನು, ಬಿಸಾಡಲಿ. ತನ್ಮೂಲಕ ಜನಮನದಲಿ ಜನಕತೆಯು ಹಿಗ್ಗಿ, ಆತ್ಮಾರಾಮತೆಯ ಪ್ರೇಮದ ನವನಿಷ್ಕಾಮತೆ ನೆಲಸಲಿ ಎಂದು ವರಕವಿಗಳ ಆಶಯ ಇಲ್ಲಿ ಅಭಿವ್ಯಕ್ತಿಗೊಂಡಿದೆ.

ಈ ವಿಭಾಗದಲ್ಲಿಯ ಕೊನೆಯ ಕವನ "ಹೋರಾಡು ಹೋರಾಡು" ಇದು ಕೇವಲ ಎಂಟು ಸಾಲಿನ ಕವಿತೆಯಾದರೂ ಅತ್ಯಂತ ಮಹತ್ವದ ಕವಿತೆಯೆಂದೇ ಹೇಳಬೇಕು.

"ಎಚ್ಚರೆಚ್ಚರು ! ಏಳು ! ಎಚ್ಚರು !
ನಿದ್ದೆಹೋಗದಿರೆಚ್ಚರ ;
ಸೂರೆಹೋದೀತೆಲ್ಲ; ನೀನೇ
ಸೆರೆಗೆ ಸಿಕ್ಕೀ ಬೆಚ್ಚರ !"

ಇದು ಮೊದಲನೆಯ ನುಡಿ. ನಿದ್ದೆ ಹೋಗದಿರು, ಎಚ್ಚರದಿಂದಿರು. ಮಲಗಿದ್ದರೆ ಏಳು, ಎಚ್ಚರಾಗು ಇಲ್ಲದಿದ್ದರೆ ಎಲ್ಲವೂ ಲೂಟಿಯಾದೀತು. ನೀನೇ ಸೆರೆಗೆ ಸಿಕ್ಕೀಯೆ ಎಂದು ಎಚ್ಚರಿಸಲಾಗಿದೆ.

ಈ ಕವನದ ಕೊನೆಯ ನುಡಿ ಹೀಗಿದೆ:

"ಹೋರು ಹೋರಲೆ ಹೋರಿ, ಹೋರೆನೆನ್ನುವ ಪೋರ,
ಹೋರೆ ಹೊಗದಿರು ; ಹೋರಿ ಹೊರವನಾಳು ;
ಹೋರೆ ಹೊರೆಯಲ್ಲ; ಭಾಪುರೆ ! ಪುರುಷ ಪರಮೇಶ
ಅವನ ಹೋರಿಯೆ ! ಏಳು ಎಲ್ಲ ತಾಳು."

ವಿಶ್ವಕವಿ ಅಂಬಿಕಾತನಯದತ್ತರು ಜೀವನದ ಮಹಾಸಂದೇಶವನ್ನು ಇಲ್ಲಿ ನೀಡಿದ್ದಾರೆ ಎಂದೇ ಹೇಳಬೇಕು. ಏ! ಹೋರಿ, ಹೋರಾಟವನ್ನು ಮಾಡು. ಹೋರಾಟ ಮಾಡುವುದಿಲ್ಲ ಎನ್ನುವ ಪೋರ (ಎಳೆಯ) ನಿರುಪಯುಕ್ತ, ಪೋರನೇ ಭೀತಿಯಿಂದ ಪೊಟ್ಟರೆಯ ಹೊಕ್ಕರೆ, ಹೇಗೆ? ಪೋರನು ಹೋರಾಟಮಾಡಿಯೇ ಆಳಬೇಕಾಗುತ್ತದೆ. ಹೋರಾಟ ಎಂದೂ ಹೊರೆಯಲ್ಲ=ಭಾರವಲ್ಲ ಎಂದು ತಿಳಿದವನೇ ಭೂಪ. ಒಳ್ಳೆಯದಕ್ಕಾಗಿ ಹೋರಾಡುವ ಪುರುಷ-ಪರಮೇಶ ಹೋರಿಯಾಗಿ ಹೋರಾಟ ಮಾಡುವುದು ಉತ್ತಮ ಭವಿಷ್ಯತ್ತಿನ ಮಾರ್ಗ. ಇಂಥ ಹೋರಾಟಕ್ಕಾಗಿ ಏಳು; ಈ ಹೋರಾಟದಲ್ಲಿ ಬರುವ ಎಲ್ಲ ಕಷ್ಟ-ನಷ್ಟಗಳನ್ನು ತಾಳು, ಹೋರಾಟದ ಜಯಭೇರಿಯನ್ನು ಬಾರಿಸು. ಇದು ಸಾರ್ವಕಾಲಿಕ-ಸರ್ವೋತ್ತಮ ಸಂದೇಶವಾಗಿ ವಿಶ್ವಕವಿ ಅಂಬಿಕಾತನಯದತ್ತರ ಭವಿಷ್ಯವಾಣಿಯು ಹೊರಹೊಮ್ಮಿದೆ. ಈ ಸಂದೇಶವು ಕಾರ್ಯರೂಪಕ್ಕೆ ಬಂದಾಗ ನವಮಾನವನ ಉದಯ ಸಾಧ್ಯ.

"ಬೇಂದ್ರೆ ಕುಟೀರ",
ಹುಬ್ಬಳ್ಳಿ - ೩೦
೧೮-೫-೨೦೦೭

ಡಾ|| ಕೆ. ಎಸ್. ಶರ್ಮಾ
ನಿರ್ದೇಶಕರು
ವರಕವಿ ಡಾ|| ದ. ರಾ. ಬೇಂದ್ರೆ
ಸಂಶೋಧನ ಸಂಸ್ಥೆ ಹಾಗೂ ಬೇಂದ್ರೆ ಸಂಗೀತ ಅಕಾಡಮಿ.

ಕಾರ್ಯಸ್ಥಳ : "ಬೇಂದ್ರೆ ಕುಟೀರ", ವಿಶ್ವಶ್ರಮ ಚೇತನ, ಗೋಕುಲ ರಸ್ತೆ ಹುಬ್ಬಳ್ಳಿ-೫೮೦ ೦೩೦. ದೂರವಾಣಿ : ೨೩೩೦೪೬೬

## ಮುಕ್ತಕಂಠ

ಯಾವುದೇ ಕಾಲದ ಕವಿಗೆ ಭೂತಕಾಲದಲ್ಲಿ ಮಹಾಕವಿಗಳು ಆಗಿ ಹೋಗಿರುತ್ತಾರೆ. ಅವರ ಕಾವ್ಯದ ಮಧುವನ್ನು ಆಸ್ವಾದಿಸಿ, ಮುಕ್ತಕಂಠದಿಂದ ಅದರ ಹಿರಿಮೆಯನ್ನು ಒಪ್ಪಿಕೊಳ್ಳಬೇಕು. ಭವಿಷ್ಯಕಾಲದಲ್ಲಿಯೂ ಮಹಾಕವಿಗಳು ಜನಿಸಲಿದ್ದಾರೆ ಎಂಬ ಎಚ್ಚರಿಕೆಯಿಂದ, ತನ್ನ ಪಾಲಿನ ಕರ್ತವ್ಯ ಪಾಲಿಸಬೇಕು. ಅದನ್ನು ವರಕವಿ ಬೇಂದ್ರೆ ಅತ್ಯಂತ ಪ್ರಾಮಾಣಿಕವಾಗಿ ಮಾಡಿದ್ದಾರೆ.

ಗುರುಮರ್ಯರಾದ - ಕಾಲಿದಾಸ, ಶಂಕರಾಚಾರ್ಯ, ಓಮರ್ ಖಯಾಮ್, ಜ್ಞಾನೇಶ್ವರ ಹಾಗೂ ರಮಣ ಮಹರ್ಷಿಗಳ ಮಹೋನ್ನತ ಕಾವ್ಯವಾಣಿಗೆ ಕನ್ನಡಿ ಹಿಡಿಯುವ ಕಾರ್ಯ ಬೇಂದ್ರೆ ಮಾಡಿದರು. ಈ ಗುರುಸೇವೆ, ಬೇಂದ್ರೆಕಾವ್ಯವನ್ನು ಅಭಿವೃದ್ಧಿಪಡಿಸಿ, ಅಲ್ಲಿ ಸಾಹಿತ್ಯ ಸರಸ್ವತಿ, ಅಂಬಿಕಾತನಯದತ್ತವಾಣಿಯು ಮುಕ್ತ ಲಾಸ್ಯನರ್ತನ ಮಾಡಿದ್ದಾಳೆ.

ಈ ಸಂಕಲನದಲ್ಲಿ ಪ್ರತಿವರ್ಷದ ಋತುಮಾನಗಳ ಹೊಸತನವನ್ನು ವರ್ಣಿಸುವ ಕವನಗಳಿವೆ. 'ಗೆಳೆಯರ ಗುಂಪಿನ' ಕಾಲಕ್ಕೆ ಮೌನವಾರಗಳನ್ನು ಒಂದು ವ್ರತವಾಗಿ ಆಚರಿಸಿ, ಅರಿತ ಹಿರಿಮೆಯ ಗುರುತು ನೋಂದಾಗಿದೆ. ತನ್ನ ಮಕ್ಕಳನ್ನು ಕಂಡು ಸ್ಪಂದಿಸಿದ ಹೃದಯ, ಇತರರ ಮಕ್ಕಳಿಗಾಗಿಯೂ ಪ್ರತಿಕ್ರಿಯೆ ತೋರಿಸಿದೆ.

ಸಾಮಾಜಿಕ ಜೀವನದ ಆಗುಹೋಗುಗಳನ್ನು ಕಂಡು ವಿಮರ್ಶಿಸುವಾಗ, ಮುಕ್ತಕಂಠದಿಂದ ಗುಣಗಳನ್ನು ಬೇಂದ್ರೆ ಹೊಗಳಿದ್ದಾರೆ ಹಾಗೂ ದೋಷಗಳನ್ನು ವಿನೋದ ದೃಷ್ಟಿಯಿಂದ ನೋಡಿ, ಅನುಕಂಪ ಪಟ್ಟಿದ್ದಾರೆ. ಇಲ್ಲಿಯ ನಲವತ್ತೆರಡು ಕವನಗಳ ಗುಚ್ಛವನ್ನು ಮುಕ್ತವಾಗಿ ಆಸ್ವಾದಿಸಿ, ಆನಂದಪಡೆಯಬೇಕೆಂಬ ಆಶಯ ಕವಿಯದು.

- ಸಂ.

# ೧ ರಮಣಹೃದಯ

(ಶ್ರೀ ಭಗವಾನ್ ರಮಣಮಹರ್ಷಯೇ ನಮಃ)

೧
ಉಂಟೆಂಬುದರ ಅರಿವು ಅದ ಬಿಟ್ಟು ಇರಲಹುದೆ ?
ಇದೆ ಇಲ್ಲ ಎಣಿಸದ ಎದೆಯೇ ಇದೆ ॥
ಅಳತೆಗಳವಡದೊಂದನೆಂತಾರೆ ನೆನೆವುದು ?
ನೆನವೆ ಘನವಾಗುಳಿದ ಉಳಿವೆ ಎದೆ.

೨
ಸತ್ತೇನು ನಾನೆಂದು ಸಾವುಂಡ ದೇವಗೆ ।
ಮೊರೆಹೊಕ್ಕು ನಾನೆಂಬುದೇ ಸಾವುದು ॥
ಹೀಗಾಗಿ ಇದ್ದಾಗೆ ಸಾವಿಲ್ಲದವರಾಗೆ ।
ಸಾವುಗೀವಿಗೆ ಎಡೆ ಎಲ್ಲಿಹುದು ?

೩
ಕಾಂಬನು ಕಾಂಬುದು ಎಂಬುದರ ಬೇರಿಗೆ ।
ಮೀರಿದ ಕಸುವಿನ ಅಸುವೊಂದಿದೆ ॥
ಚಿತ್ರಪಟದಾಟಕೆ ನೋಟಕ ನಾಟಕ ।
ಬಿಳಿಬಟ್ಟೆ ಬೆಳಕು ತಾನೊಂದಾಗಿದೆ.

೪
ಎಲ್ಲ ಎಣಿಕೆಯ ಪಸರ ಜಗ-ಜೀವ-ಪರಮಾತ್ಮ ।
ಆತನ ತತ್ತ್ವದ ಮೊದಲು ಕಡೆ ॥
ನಾನುಂಟೆ ? ಜಗವುಂಟು ; ಅವನುಂಟು ; ಮೂರುಂಟು
ನಾನಿಲ್ಲ ; ತಾನೊಂದೆ ಎಲ್ಲಕಡೆ.

೫
ಹಿಗ್ಗಿದೆ ಕುಗ್ಗಿದೆ ಜೀವ ಜಡ ದಿಟ ಸಟ ।
ಘಟಮಟ ನ್ಯಾಯವು ಆಟಮಟವು ॥
ಎಲ್ಲರಿಗು ಬೇಕಾದ ಬೆಲ್ಲದಿರವು ಅಲ್ಲಿ ।
ಇದರಾಚೆ ತಾನು ತಾನಾಗಿರಲು.



೬
ಜಗದೇವವೆರಡಕು ರೂಪುಂಟು ರೂಪಿಲ್ಲ।
ತನಗಿದ್ದಂತದಕಿದೆ ಆಕಾರವು ॥
ಎಲ್ಲವನು ಒಳಗೊಂಡ ಒಂದೆ ಕಣ್ಣಾಗುತ।
ತಾನೆ ತಾನಾಗಿರಲು ಕಂಡೀತೇನು ?

೭
ಅಯ್ದು ಚೀಲಗಳಲ್ಲಿ ಮೈತುಂಬಿಕೊಂಡಿದೆ।
ಮೈಹೊಟ್ಟೆಯೊಳು ಬಂತು ಅಯ್ದರಾಟ ॥
ಮೈಯುಂಟೆ? ಜಗವುಂಟು; ಜಗದೊಂದು ಮೈಯುಂಟು।
ಮೈಯಿಲ್ಲದಲೆ ಕಂಡರಾರು ಜಗ ?

೮
ಒಡವೆಯ ಒಡಲೆಲ್ಲ ಸವಿರೂಪು ನುಡಿಕಂಪು।
ಮುಟ್ಟುತಟ್ಟನೊಳಿದೆ ಭೂಭುವನ ॥
ಇದಕೆಲ್ಲ ಮನ ಮೂಲ ಮನದಲ್ಲೆ ಜಗವೆಲ್ಲ।
ಭುವನದಿ ಮೂಡಿದೆ ಮನದತನ

೯
ಬಗೆಯೊಡನೆ ಮೂಡುತ, ಬಗೆಯೊಡನೆ ಮುಳುಗುತ।
ಬಗೆಹೊಳೆ ಹರಿದಂತೆ ಜಗ ಹೊಳೆವುದು ॥
ಹುಟ್ಟಿಲ್ಲ ಸತ್ತಿಲ್ಲ ಇದ್ದೊಂದು ಇಡಿ ಒಡವೆ।
ಬಗೆ ಬಯಲಾಟವಿದ್ದಷ್ಟರೊಳು

೧೦
ಏನುಂಟೊ ಇದರಾಚೆ ಅದ ಕಾಂಬ ಪೂಜೆಗೆ।
ಹೆಸರು ಮಾಟಗಳೆರಡೂ ಹೂವಾಗಲು ॥
ಏನುಂಟೊ ಅದರೊಡ ತಾನೊಡಂಬಟ್ಟಾಗ।
ನಿಲುಕಿದ ನಿಲುವಿಗೆ ಉಂಟೆಂಬರು

೧೧
ಇದ್ದೊಂದು ಒಡವೆಯೆ ಇಬ್ಬಗೆ ಮೂವಗೆ।
ಬಗೆಬಗೆ ಒಡಮೂಡಿ ಬಗೆಗೊಳಲು ॥
ಅದನೊಂದೆ ಹುಡುಕಲು ಉಳಿದೆಲ್ಲವಳಿವುದು।
ಇದ ಕಂಡ ಕಣ್ಣೆಂತು ನಡುಗುವುದು ?



೧೨
ಮರೆವಿಲ್ಲದರಿವಿಲ್ಲ ಅರಿವಿರದೆ ಮರೆವಿಲ್ಲ।
ಒಂದನೊಂದನು ಅವು ಹೊಂದಿಹವು॥
ಇದರ ಇಬ್ಬಗೆ ಬಗೆದು ಒಳಹೊಕ್ಕು ನೋಡಲು।
ಬೇರು, ಬೀಜದ ಒಳಗು ತಾನಹುದು

೧೩
ತನ್ನ ತಾ ತಿಳಿಯದ ಆ ಜ್ಞಾನ ಅಜ್ಞಾನ।
ಒಳಹುರುಳ ತಿಳುವಳಿಕೆ ಎಂದಾದೀತು?॥
ಅರಿವಿಗು ಮರೆವಿಗು ಇರವೆ ಆಧಾರವು।
ಆಧಾರ ಒಳಬಟ್ಟೆ ಮುಟ್ಟುವದು

೧೪
ನಿದ್ದೆಯ ಮರೆವಲ್ಲ ಎದ್ದಾಗಿನರಿವಲ್ಲ।
ತನ್ನ ತಾ ತಿಳಿದಾಗ ಕಾಂಬುದೇನು?॥
ಬೆಳಕಿನ ಮಡಲಲ್ಲಿ ಬಣ್ಣವಡಗಿದೆ ಹಾಗೆ।
ಇಲ್ಲವಾಗುವದಿಲ್ಲ, ಉಂಟೆಂಬುದು.

೧೫
ತಂತನದ ತಂತಿಗೆ ಎಂತು ತಾನ ತರಂಗ।
ಅಂತೊಂದು ಹೊಂದಿದೆ ಹಲಕೆಲವು॥
ಬಂಗಾರವೆಳೆದಾಡೆ ಸಿಂಗಾರದಾಭರಣ।
ಇದ್ದೊಂದರಿರವರಿವು ಬಂಗಾರವು

೧೬
ನಾನುಂಟು, ನೀನುಂಟು, ಅವನುಂಟು. ಏಕಿಲ್ಲ?।
ತಾನೆ ತಾನಾದಾಗ ನಾನಿಂಗಿತು॥
ನಾನಿಲ್ಲ, ನೀನಿಲ್ಲ, ಅವನಿಲ್ಲ, ತಾನೊಂದು।
ಗಾಳಿ ನುಂಗಿದ ಬೆಳಕಿನಂತಿದ್ದಿತು

೧೭
ಹಿಂದು ಮುಂದಾಗುವ ಇಂದೇ ಉದ್ದಕ್ಕಿಹುದು।
ಇಂದಿರದೆ ಹಿಂದಿತ್ತೆ? ಮುಂದಿದ್ದಿತೆ?॥
ಹಿಂದೇನು ಮುಂದೇನು ಇಂದೆಂಬುದಿರದಿರೆ।
ಎಣಿಸುವರೆ ಒಂದೆನದೆ ಎರಡೆಂಬರೇ?



೧೮
ನಾವಿರಲು ಹೊಳೆವುದು ಹೊತ್ತು ಗೊತ್ತಿನ ಗತು।
ನಾ ಮೈಯು ಎನಲು ದಿಕ್ಕಾಲ ಕಡೆ ॥
ಎಲ್ಲೆಲ್ಲು ನಾವಿಲ್ಲ ಎಂದಿಗೂ ನಾವಿಲ್ಲ।
ಆದರು ತಾವುಂಟು ಎಲ್ಲ ಕಡೆ

೧೯
ತಾನು ವೈಗೂಡಿಹುದು ಬಲ್ಲವರಿಗೂ ಉಂಟು।
ತಾನೆಂಬ ಬೆಳಕು ಅವರೆದೆಯೊಳಿದೆ ॥
ಆ ಬೆಳಕು ವೈದುಂಬಿ ಜಗದುಂಬಿ ಮಿಗುವುದು।
ನಾಡಾಡಿ ವೈಯಲ್ಲಿ ತಾನಡಗಿದೆ

೨೦
ಅಜ್ಞಗು, ಸುಜ್ಞಗು ಲೋಕವೆಂಬುವದುಂಟು।
ಅಜ್ಞಗೆ ಕಂಡದ್ದೆ ಕಡೆಯಾಗಿದೆ ॥
ಸುಜ್ಞಗೆ ಕಂಡುದರ ಬುಡದಲಿದ್ದದ್ದೊಂದು।
ಇಡಿ ಕಡೆ ಕಣ್ಣೆಂಬುದದು ಕಂಡಿದೆ.

೨೧
ದೈವಪೌರುಷವೆಂಬ ಇಬ್ಬಗೆಯ ವಾದವು।
ಉಂಟು ಎರಡರ ಬೇರನರಿಯದಗೆ ॥
ದೈವ ಪೌರುಷ ಹೋಳು, ಬೇಳೆ ಬೀಜವ ಹಿಡಿಯೆ।
ಎಂತೇನು ದೈವವು ಪೌರುಷವೇ ?

೨೨
ಕಾಂಬನ ಕಾಣದೆ ದೇವನ ಕಾಂಬುದು।
ಮನದ ಕಣ್ಣಲೆ ಕಂಡ ಕಲ್ಪನೆಯು ॥
ಕಾಂಬನಿಂದದ ಬೇರೆ ಬಿಂಬವೆಂಬುದು ಉಂಟೆ ?
ಕಣ್ಣಾರೆ ಕಾಂಬನೆ ನಿಲುಕಡೆಯು.

೨೩
ತನ್ನ ತಾ ಕಾಂಬುದು ಮೇಲವನ ಎಂಬುದು।
ಆಗ ಮುಕ್ತಿಯ ಭಾವ ಗಹನವಿದು ॥
ಕಣ್ಣು ತಾನಾಗದೆ ನಿಜವೆಂತು ಕಂಡೀತು ?
ತಾನವನ ತುತ್ತಾಗೆ ಅದೆ ಕಾಂಬುದು.



೨೪
ಬಗೆಯೊಳಗೆ ಬೆಳಕಿತ್ತು ನಿಜವಲ್ಲಿ ಬೆಳಗುವದು।
ನಿಜವರಿತು ಬಗೆಯಲ್ಲಿ ಮೂಡುತಿದೆ॥
ಬಗೆಯ ಒಳಮೊಗವಾಗಿ ನಿಜ ಬೆರೆಯಲೆಂದಾಗ।
ಬೇರೆ ಇಲ್ಲವು ತಾನೆ ನಿಜವಲ್ಲದೆ.
೨೫
ನಿದ್ದೆಯೊಳಗೆ ನಾನು ಇದ್ದಿಲ್ಲ; ಎದ್ದಾಗ।
ಮೈಯಷ್ಟೆ ನಾನಿರುವೆ ಎಂಬ ಜನ॥
ಉಂಟೇ? ಉಂಟಿನ ಗಂಟು, ಬಿಚ್ಚಿ ನೋಡಲು ಬೇಕು।
ತಾನೆಂಬ ಹಮ್ಮುದಿಸೆ ಅರುಣೋದಯ.
೨೬
ಮೈಗಾವ ಅರಿವುಂಟು? ಇದ್ದುದಕೆ ಹುಟ್ಟಿಲ್ಲ।
ನಡುವಾರೊ ಮೈವೆತ್ತ ಕಂಡವರು॥
ನಾನು ತಾನಿನ ಗಂಟು ಸಣ್ಣೆಳೆ ಒಳಗುಂಟು।
ಅರಿವೆ ಮೈವೆತ್ತುಸಿರಿಸವ ಜೀವನು.
೨೭
ಮಾಟದಲ್ಲಿಯೆ ಹುಟ್ಟ, ಮಾಟಗಳಲಿ ಬೆಳೆದು।
ಮಾಟವತಿಂದು ಮಾಟವ ತಳೆದು॥
ತಾನೆಂತು ಮಾಟಲ್ಲ ಮಾಟದಾಟವಿದೇನೋ।
ಏತಕು ಸಿಗದು ಹಮ್ಮಿನ ಭೂತವು.
೨೮
ಹಮ್ಮು ಮೂಡಿದ ಒಡನೆ ಉಳಿದೆಲ್ಲ ಮೂಡುವದು।
ಹಮ್ಮಿನ ಒಡನೆಲ್ಲಾ ಮುಳುಗುವದು॥
ಮಾಟದ ಸೃಷ್ಟಿಗೆ ಹಮ್ಮೆ ಬ್ರಹ್ಮವು; ಅದನೆ।
ಹುಡುಕಲೆಲ್ಲವ ಗೆಲ್ಲಲದು ಹಾದಿಯು.
೨೯
ಉಂಟೇನೊ ಅದರೊಳಗೆ ನಾನೆಂಬ ಗಂಟಿಲ್ಲ।
ಹುಟ್ಟಿ ಹುಡುಕಲು ಹಮ್ಮು ಹುಳವೇ ಇಲ್ಲ॥
ಹಮ್ಮಿನ ಮರವಗೆದು ಬೇರೆತ್ತಿ ಕೀಳದೆ।
ತಾನಿನ ತಾದಾತ್ಮ್ಯ ಯಾವ ಬಲ್ಲ?



೩೦
ನೀರಿನಾಳದೊಳದ್ದಿ ಮುಳುಗಿ ನೋಡುವನಂತೆ।
ಬಗೆಯ ಧಾರೆಯ ಹಿಡಿದು ಒಳಬಗೆದು॥
ಮನ ಮಾತು ಉಸಿರಾಟ ಕಟ್ಟಟ್ಟು ಬಗೆದರೆ।
ಹಮ್ಮಿನ ಮೊದಲಾಗ ದೊರೆಕೊಂಬುದು.
೩೧
ಮೌನಕಾಸಾರದ ತಳಸೋಸಿ ಕಾಣಲು।
ನಾನೆಂಬ ಬಗೆ ಬೇರು ಬಂತೆಂತಿದು?।
ನಾನಲ್ಲ ಇದು, ನನ್ನದಲ್ಲ ಇದೆನ್ನುತ।
ತಾನೆಂಬ ಗಡ್ಡೆಗೆ ಬಗೆ ಬಹುದು.
೩೨
ನಾನಾರು ನಾನೇನು ಬಗೆ ಜಾಡ ಹಿಡಿದಾಡಿ।
ಅಲ್ಲಿಲ್ಲ ಉಂಟಿದೆ ಇದೆ ಎದೆಯು॥
ನಾನಿನ ತಲೆ ಸಿಡಿದು, ತಾನೆ ತಲೆಯೆತ್ತಿತು।
ತಾನೆ ತಾನಾದಾಗ, ಇಡಿ ತುಂಬಿತು
೩೩
ಹಮ್ಮಿನ ತುತ್ತುಂಡು ಬಿಮ್ಮನೆ ಬೆಳಗುವದೆ।
'ಕಿಂ' ಎಂಬ ಕಾರ್ಯವು ಅವನಿಗಿಲ್ಲ॥
ತಾನಿಲ್ಲ, ಇದಿರಿಲ್ಲ, ತಾನೆಲ್ಲ ಕಂಡವನ।
ಸ್ಥಿತಿಯನ್ನು ಸಿಕ್ಕವನೇನು ಬಲ್ಲ?
೩೪
'ಅದು ನೀನಿರುವೆ' ಎಂದು ಎಂದರು ಕೂಡ।
ಆತನ ನಿಲುವದು ನಿಲುಕದಿದೆ॥
ಬಡ ಬಗೆ ಬಡದಾಡಿ ಸಿಡಿಮಿಡಿಗೊಂಬುದು।
'ಅದು' ತಾನೆ ಎಂಬಂತೆ ಬೆಳಗುತಿದೆ.
೩೫
'ನಾ ಬಲ್ಲೆ' 'ಗೊತ್ತಿಲ್ಲ' ಎಂಬ ವಾದದ ಹಾದಿ।
ಬಗೆಗೇಡು ನಗೆಗೇಡು ಹತಮತಿಯು॥
ಕಣ್ಣು-ಕಾಣ್ಕೆಗಳೆಂದು ತಾನೆರಡು ಹೋಳುಂಟೆ।
ತಾನೆಂದೆ ಎಂದೆಲ್ಲರನುಭೂತಿಯು.



೩೬
'ಇದೆ'ಂಬ ಒಡವೆಗೆ ಎದೆ, ಮನೆ, ಅಲ್ಲಿದ್ದು।
ಇಲ್ಲೆಂಬ ತೆರದೊಳಿಹುದೇನಿರವೊ ? ॥
ಒಂದು, ಹಲವು, ಮಾಟ, ಬಯಲು, ಇದೆ, ಇಲ್ಲೆಂದು।
ಮಾಟದಾಟದ ಮಾತು ಯಾವರಿವೋ ?

೩೭
ಇದ್ದುದ ಪಡೆದರೆ ಸಿದ್ಧಿಯ ಪಡೆದಂತೆ।
ಉಳಿದ ಸಿದ್ಧಿಯ ಗುದ್ದಿ ಬರಿಗನಸೇ ॥
ಎದ್ದವನಗನಸೊಂದು ಇದ್ದೇನು, ಇರದೇನು।
ತಾನಾದವಗೆ ಮಾಯೆ ಮುಸುಕುವದೆ ?

೩೮
ತಾನೆ ಮೈಯೆಂದಪ್ಪಿ ಮೈಯಾಗಿ ಹೋದವಗೆ।
'ನಾನಿಹೆ ಅವನೆ'ಂಬ ಮನನವಿದೆ ॥
ತಾನೆ ತಾನಾದಾಗ ಏನಿದಕರ್ಥವು।
'ನರ' ನರನೆಂದರೆ ಅದು ಸಾರ್ಥವೇ ?

೩೯
ಬಗೆಬಗೆ ಎರಡುಂಟು ನಿಜದಲ್ಲಿ ಒಂದುಂಟು।
ಎಂಬ ವಾದದ ಹಾದಿ ತಾ ಸಾಧುವೆ ॥
ಹತ್ತು ಹುಚ್ಚುರು ಎತ್ತ ಎಣಿಸಿದರು ಒಂಬತ್ತು।
ಎಣಿಸುವನೆ ಇದ್ದಲ್ಲಿ ಸತ್ತಿದ್ದನೇ ?

೪೦
ನಾನು ಮಾಡುವೆನೆಂಬ ಬಗೆಗಂಟಿಕೊಂಡವನು।
ತಾನು ಪಡಿಯುವದುಂಟು ಬಂದ ಫಲ ॥
ನಾನಿಲ್ಲ ತಾನುಂಟು ಎಂದೆದೆಗಂಡರೆ।
ಮೂರು ಕರ್ಮವು ಮುಗಿದು ಮುಕ್ತಿಬಲ.

೪೧
ಕಟ್ಟು ಪಡೆದವಗುಂಟು ಬಿಚ್ಚಿಕೊಳ್ಳುವ ಚಿಂತೆ।
ಕಟ್ಟು ಒಡೆದವನಾರು ? ಇದೆ ಬಗೆಯಲು ॥
ಕಟ್ಟಿಲ್ಲ ಹುಟ್ಟಿಲ್ಲ, ತಾನೆ ತಾನೆನೆ ಬಿಡುವು।
ಕಟ್ಟಿದ್ದು ಬಿಚ್ಚಿದ್ದು ಬರಿ ಭ್ರಮೆಯು.



೪೨
ಮಾಟವ ಮೀರಿದೆ ಮಾಟದಿ ಮುಗಿದಿದೆ।
ಇದೆ ಹಾಗೂ, ಇದೆ ಹೀಗೂ, ಮೂವಗೆಯು।
ಮುಕ್ತಿಯೆಂಬರು ಮುಂದಿ, ನಾನಂತು ಮುಳುಗಿದೆ।
ತಾನಾಗಿ ಉಳಿದಿಹೆ. ಏನಿದ್ದೇನು?

೪೩
ಮುಂಬೆಳಗ ಕಿರಣವೆ ಆರುಣಾಚಲದಿಂದಿಳಿದು।
ರಮಣವಾಣಿಯಲೇಕಸರವಾಗಿದೆ॥
ಹಳವಾತೆ ಹುಸಿತೊಳೆದು, ಹೊಳೆಹೊಳೆದು ಹುತ್ತಿನ।
ಹೊಳೆ ಹರಿದು ಬಂದಂತೆ ಹೊಸದಾಗಿದೆ.

೪೪
ಪಡೆದವರಾಡಿದರೆ, ಮಡಿದವರು ಏಳುವರು।
ಸತ್ಯಕ್ಕೆ ಸತ್ತೆಯು ಬಂದಂತಿದೆ॥
ಮಾತನೆ ಮಿದ್ದಾಡೆ, ಮುದ್ದೆಯಾಯಿತು ಮನವು।
ಇದ್ದಂತೆ ಸತ್ತಂತೆ (ಸತ್+ಅಂತೆ) ಎಂದಂತಿದೆ.

೪೫
'ಗಣಪತಿಮುನಿ'ಗಳ ಮನನದಿ ನೆನೆದಾಡಿ।
ನನೆಕೊನೆ ಹೋಯಿತು ನುಡಿಯ ನಡೆ॥
ಅರವಿಂದವರಳಿರಲು ಎರವಿಂದ ಮಾತೇಕೆ।
ಅನುಭವ ಒಮ್ಮೊಗ ಕಟ್ಟಕಡೆ.

೪೬
ದತ್ತವಾಯಿತು ವಾಣಿ ಗುರುಗಳಡಿಗಳಲ್ಲಿ।
ಅವರಾಡಿದ್ದಾಡಿದರೆ, ತಪ್ಪೇನಿದೆ?॥
ಕನ್ನಡ ಮುನ್ನಡೆ, ಗುಡಿಯೆತ್ತಿ ಬರುತಿದೆ॥
ತನ್ನ ತಾನರಿಯೆಂದು ಒಪ್ಪಿಸಿದೆ.

೪೭
ಶ್ರೀ ರಮಣರ ಮಂತ್ರ; ಗಣಪತಿಯ ತಂತ್ರದಿ।
ದತ್ತನ ಧ್ವನಿಯಂತ್ರದಲಿ ಬೀಸಿದೆ॥
ಅರವು ಮಾತಿನ ಅರಿವು, ದೇವವಾಣಿಯ ಸ್ವರವು।
ಕನ್ನಡದಲಿ ತಾನೆ ಕನ್ನಡಿಸಿದೆ.

೪೮
ಗುರು ಅರವಿಂದರ, ಅರಿವಿಂದ ಅರಳಿದ।
ಅರವಿಂದ ಮಕರಂದ ಬೆಳೆಯುತಿರೆ॥
ಮಾತೆಯ ನೆನಹಿಗೆ ಮಾತೆಲ್ಲ ಹೂತಿರೆ।
ಸ್ವರಸ ಸರಸತಿಯಾಗಿ, ಹರಸುತಿದೆ.
೪೯
ನಾಡಿಗೆ ಹೊಸ ಜೀವ ಕಳೆ ಮೂಡಿ ಬರುತಿದೆ
ಬೇರೆ ಮೋಹನ ಮೋಡಿಯು ತಾ ನಡೆದಿರೆ
ಮಾಗಿ ಬಂದಿದೆ ಈಗ; ಮಾಗು ಜೀವವೆ ಬೇಗ
ಧಾರಾತೀರ್ಥದ ದುರ್ಗೆ ಶ್ರುತಿ ಹಿಡಿದಿರೆ.
೫೦
ಅಂಬಿಕಾತನಯನ ಚುಂಬಿಸಿದಳು ತಾಯಿ।
ಆ ಬಾಯಿಯಾಯಿತು ಹಾಡಹೊಳೆ॥
ತಾಯಿಯ ಎದೆಹಾಲಿನಂತಿದ್ದ ರಮಣರು।
'ಇದೆ' ಎನಲು ಅದೆಯಾಯ್ತು ಎದೆಯ ಬೆಳೆ.

ರಚನೆ : ೨೨-೧೧-೧೯೩೮ : ಸೋಮವಾರ

---

ಭಾವ : 'ರಮಣ ಹೃದಯ'ಕ್ಕೆ ಶ್ರೀ ವಾಸಿಷ್ಟ ಗಣಪತಿ ಮುನಿಗಳ ಮತ್ತು ಕಾಪಾಲಿಶಾಸ್ತ್ರಿಗಳ ಉಕ್ತಿವಿನ್ಯಾಸ ನೆರವಾಗಿದೆ. ಮೂಲ ಅನುಭವ-ಶ್ರೀ ರಮಣರದು.

ಶಬ್ದಾರ್ಥ : ಕಾಂಬನು=ಕಾಣುವವನು. ಕಾಂಬುವುದು=ಕಾಣುವುದು. ಹಮ್ಮು=ಅಹಂಕಾರ. ಎರವು=ಕಡವಾಗಿ ಪಡೆದುಕೊಂಡ ವಸ್ತು. ಅರವು=ತಮಿಳು ಭಾಷೆ.

ವಿಶೇಷ : ಮೂಲ ಹಸ್ತಪ್ರತಿ ಹಾಗೂ ರಚನೆಯ ದಿನಾಂಕ ದೊರಕಿದ್ದರಿಂದ, ಅದರಂತೆ ನುಡಿಗಳ ಕ್ರಮ ಹೊಸದಾಗಿ ಹೊಂದಿಸಿದೆ. ಪ್ರಕಟಿತ ಪದ್ಯದಲ್ಲಿ ನುಡಿ ೪೯ ಮುದ್ರಣವಾಗಿರಲಿಲ್ಲ. ಅದನ್ನು ಈಗ ಸೇರಿಸಿ, ಒಟ್ಟು ೫೦ ನುಡಿಯ ರಚನೆ ಮಾಡಲಾಗಿದೆ.

ನಾಕು ತಂತಿಯ-ನಾನು, ನೀನು, ಆನು, ತಾನು ಎಂಬ ವಿಚಾರ ೧೯೩೮ ರಿಂದಲೇ ಬೇಂದ್ರೆ ಮನ ವ್ಯಾಪಿಸುತ್ತಿತ್ತು ಎಂಬುದು ಇಲ್ಲಿಯ ಅನೇಕ ನುಡಿಗಳಲ್ಲಿ ಕಂಡು ಬರುತ್ತದೆ. ರಮಣ ಮಹರ್ಷಿಗಳ ಕಾಲ-೧೮೮೦ ರಿಂದ ೧೯೫೦.



# ೨ ಅಮೃತಾನುಭವ

೧

ನಮೋ ಎಂಬೆ ಚೈತನ್ಯದೇವ ಶ್ರೀಮನ್ನಿವೃತ್ತಿನಾಥ
ನನ್ನ ದೈವ ನನಗಾದನಣ್ಣ ನನ್ನಪ್ಪ ಗುರುವೆ ಈತ.
ಸ್ವಸ್ವರೂಪದಾನಂದದುರುಳೆ ಅರಿದಿದಕೆ ಭವದ ನೋವು.
ತೀರಲರಿಯದೋ ಹೇಳಬರದು, ಇದಕಿಲ್ಲ ಹುಟ್ಟು-ಸಾವು.

೨

ಜಯಜಯವೆ ವಿದ್ಯೆ. ಗುರುವೆನಿಸಿ ಎದ್ದೆ, ಶಾಂಕರಿ, ಸ್ವಪಾಕದಲ್ಲಿ
ನೀ ಜ್ಞಾನಸಿದ್ಧೆ, ನಾ ಪದದೊಳಿದ್ದೆ ಆ ಜ್ಞಾನಲೋಕದಲ್ಲಿ.
ದಿವ್ಯದಯೆಯ ಅವತಾರಸಾರ ಜಲಪಾತದಂತೆ ಬಂದೆ
ಶಿವದ ಮೇಲೆ ಸುರಿವಂಥ ಗಂಗೆಯೊಲು ನಿರಂತರವು ನಿಂದೆ.

೩

ಶಿವನ ಶಿವೆಯ ಶ್ರೀಲಗ್ನರಂಗವೇ ಜಗಜ್ಜನ್ಮಭೂಮಿ.
ಅವಳು ಅವಗೆ ಸ್ವಾಮಿನಿಯು, ಅವಳಿಗೋ ಆತ ತಾನೆ ಸ್ವಾಮಿ.
ಯಾರು ಯಾರೊಡನೆ ಎಂತು ಕೂಡಿದರೊ? ಈ ಅನಾದಿ ತಂತು
ಬಿಡಿಸಬರದು, ಅವಿಭಕ್ತ ಭಕ್ತಿ ಭೇದವನು ಅರಿವುದೆಂತು?

೪

ಎರಡು ದಂಡೆಗೂ ಒಂದೆ ಶ್ರುತಿಯು, ಹೂವೆರಡಕೊಂದೆ ಗಂಧ,
ಎರಡು ದೀಪದಲಿ ಒಂದು ಬೆಳಕು ಬೆಳಗುವದು ಎನಿತು ಚೆಂದ।
ಎರಡು ತುಟಿಗಳೊಳಗೊಂದೆ ಮಾತು, ಕಣ್ಣೆರಡಕೊಂದೆ ನೋಟ,
ಎರಡರಲ್ಲಿ ಒಂದಾಗಿ ನಡೆದಿಹುದು ಸೃಷ್ಟಿಯೆಂಬ ಮಾಟ.

೫

ಒಬ್ಬರೊಬ್ಬರನು ಬಿಟ್ಟು ಇರರು ಈ ಇಬ್ಬರೂನು ಕೂಡ;
ಹುಟ್ಟಲರಿದು ತೃಣ ಮಾತ್ರ ಇಬ್ಬರೂ ಕೂಡದೇನೆ ಗೂಢ.
ಒಬ್ಬರೊಬ್ಬರನು ಹೊಕ್ಕು ಹೊಮ್ಮಿ ಹೊರಮೂಡಿಸುವುದು ಮೋಡಿ.
ಪರಸ್ಪರರಿಗೂ ಜೀವಪ್ರಾಣರೆನುವಂತೆ ಇವರ ಜೋಡಿ.

೬
ಇದಕಿಂತ ಹೆಚ್ಚು ಒಳಿತಾವುದನ್ನು ಆ ಶಬ್ದ ಮಾಡಲಹುದು?
ಅದೊ ಅಬುದ ಶಬುದ ಬುದ್ಬುದವು ಒಡೆದು ಹುಸಿಸದ್ದು ಹೊರಡಬಹದು.
ನುಡಿಮುಡಿದುಕೊಂಡು ಮೆರೆಯುವದು ಮಂದಿ ಜಗದಲ್ಲಿ ಹಿಂದುಮುಂದು.
ಒಡನಾಗಿ ನೆನಪು ಮೂಡುವದು ನುಡಿಗೆ, ನುಡಿಬೆಲೆಯು ಅದುವೆ ಒಂದು.
೭
ಕೊಡುವಾಗ ಒಂದೆ ಕೊಳುವಾಗ ಒಂದೆ; ಇಬ್ಬರಿಗು ಮುದ್ದಿನಂತೆ.
ಕೊಡುಕೊಳೆಯ ಮಾಡೆ ನೀನೊಬ್ಬ ನೆಂಟ ಬಹುರೂಪಿಯಾಗಿ ನಿಂತೆ.
ನಾ ನೀನು ಎಂಬ ಎರಡೆಣಿಕೆ ಏಕೆ? ಸಂಸಾರ ಪಸರ ತುಂಬಿ
ಹಿಗ್ಗಿ ಹಿಗ್ಗಿ ಹಲವಾಗಿ ಮರಳಿ ನೀನಾದೆ ಕಣ್ಣಗೊಂಬಿ.
೮
ಒಂದುತನಕೆ ಒಡಕಿಲ್ಲವಣ್ಣ ಶಿಷ್ಯರಿಗೆ ಹಂಚಿಕೊಡಲು.
ಒಂದೆ ನೀರು ಹರಿಯುವದು ಒಡಲಿನಲಿ ಉಗಮಮುಖಗಳಲ್ಲು.
ವೇದ ಕೀರ್ತಿಸಿದ ವೇದ ಮೂರ್ತಿ ನೀ ಬಂದಿ, ಭೇದ ಬೇಕೆ ?
[ಜಲಬಿಂದು ಒಂದು ಕಡಲಲ್ಲಿ ಬೀಳೆ, ಅದು ಎಲ್ಲಿ, ಏನು, ಏಕೆ ?]
೯
ಕಂಪಿತ್ತು ಅಲ್ಲಿ ಮೂಗಾಯ್ತು ಇಲ್ಲಿ, ನಾದಾರ್ಥವಾಯ್ತು ಕಿವಿಯು,
ಕನ್ನಡಿಯು ಕಣ್ಣು ಆ ರೂಪಮೂಲ, ರುಚಿಮೂಲಕಿಹುದು ಸವಿಯು.
ಆ ಗಾಳಿ ತಾನೆ ಬೀಸಣಗೆಯಾಗಿ ತನ್ನನ್ನೆ ಬೀಸಿಕೊಳಲು
ತಲೆಯಲ್ಲೆ ಹೂವು ಅರಳಿರಲು, ಮುಡಿಸಿಕೊಳಲೇಕೆ ತಳಿರ ತೊಳಲು ?
೧೦
ತಾವರೆಯೆ ಆಗಿ ತೆರೆದಿಹುದ ನೋಡ ಆ ರವಿಯ ಛವಿಯ ನೋಟ.
ಬೆಳುದಿಂಗಳನ್ನೆ ತಿಂಗಳನು ಕುಡಿಯೆ ಚಂದ್ರಮ-ಚಕೋರದಾಟ.
ತುಂಬಿಯೆನೆ ತಾವು ಹೀರುವವು ಹೂವು, ಆ ನೀರೆ ನೀರವಾಗಿ
ಕನಸಾಗಿ ನಿದ್ದೆ ತನ್ನಲ್ಲಿ ತಾನು ತನ್ನನ್ನೆ ಮೀರದಾಗಿ.

೧೧
ಕಣ್ಣು ಕಣ್ಣು ತಿರುಮುರುವು ನೋಟ ನೋಡುವವನ ಗೊಂಬೆಯಹುದು.
ಕಲ್ಪನೆಯ ಮೂರ್ತಿ ಶಿಲ್ಪಿಯೆನೆ ತೆರೆದು ಕಲ್ಲನ್ನೆ ಕೊರೆದು ಬಹುದು
ಬಂಗಾರವೆಲ್ಲ ಆಕಾರವಾಗಿ ಆಗುವದು ವಸ್ತು ಒಡವೆ.
ನಾ ನನ್ನ ನೆಟ್ಟು, ಆನಂದಬಟ್ಟು, ನನ್ನಲ್ಲಿ ನಾನೆ ಪಡೆವೆ.
೧೨
ತಳಿರು ಚಿಗುರು ಕೋಕಿಲಗಳಾಗೆ, ತೆಂಗಾಳಿ ಮೂರ್ತವಾಗೆ
ರಸವೆ ತನ್ನ ರುಚಿ ನೋಡಿಕೊಳಲು ಮೈತುಂಬ ರಸನೆಯಾಗೆ.
೧೩
ಉಣಿಸಿದಿರಿ ನೀವು ತಣಿಸಿದಿರಿ ಕರತಲದಿ, ಹೇ ನಿವೃತ್ತಿರಾಜಾ
ಆತ್ಮತೃಪ್ತಿಯಲಿ ಮೌನವಿಹುದು ನಿಜ, ತೇಗು ಕೂಡ ಸಾಜಾ.
ರವಿಯ ಬತ್ತಿಯನು ಹೊತ್ತಿಸಿಹುದು ಬಾನಲ್ಲಿ ಈಶನೋಜ.
ಲೋಕಲೋಕಗಳ ಬೆಳಗುತಿಹುದು ಆ ಸೂಸುತುಂಬು ತೇಜ.
೧೪
ಚಂದ್ರನಲ್ಲಿ ತುಂಬುವದು ಅಮೃತ, ಆ ಚಂದ್ರ ಕುಡಿಯಲೆಂದೇ ?
ಕಡಲು ಎರೆಯುವದು ಮೋಡಗಳಿಗೆ, ನೀರಡಿಕೆ ಮೋಡಕೆಂದೇ ?
ಹಣತಿ ಸೊಡರು ಹೊತ್ತುವದು, ತನ್ನ ಮುಖವನ್ನೆ ಬೆಳಗಲೆಂದೇ ?
ಬಯಲು ಹರಹಿಹುದು ಇಂಬುಗೊಂಡು, ಈ ನಿಖಿಲಲೋಕಕೆಂದೇ !
೧೫
‘ಶಮದ ಜಲಧಿಗಾನಂದ ಶೋಭೆ ಆ ಚಂದ್ರನಿಂದ ತಮ್ಮಾ’.
ಕೊರಡು ಕೊನರಿಸುವದಣ್ಣಾ, ಸುಗ್ಗಿಯಲಿ ಅಂಥ ಕೃಪೆಯು ನಿಮ್ಮಾ.
ಅಣ್ಣದೇವರೈಶ್ವರ್ಯ ವಿಭವವೀ ಗ್ರಂಥರೂಪವೆಲ್ಲಾ
ತಮ್ಮ ಪಾದಗಳ ತಮ್ಮ ಮೋದವಿದು, ನಾ ಸ್ವತಂತ್ರನಿಲ್ಲಾ.

೧೬
ತಾನೆ ತೋರುವದ ತೆರೆವುದೇಕೆ? ಅಹುದಲ್ಲ ಅತ್ತ ಇರಲಿ.
ಪ್ರಭು-ಪ್ರಭಾವ-ವಿನ್ಯಾಸಕಿಂತು ನಾನೇಕೆ ಅಡ್ಡ ಬರಲಿ?
ಬೇರೆ ಮಾತಿನಿಂದೇನು? ಅದುವು ತಮ್ಮಲ್ಲಿ ಪ್ರಕಟವಿಹುದು.
ಸ್ವಪ್ರಕಾಶವಸ್ತುವನು ಬೇರಾವ ಬೆಳಕು ಬೆಳಗಬಹುದು?
೧೭
ಇದು ಬೆಳ್ಳಬೆಳಕು, ಬೆಡಗೇಕೆ ಇದಕೆ? ನಾ ಸುಮ್ಮನಿದ್ದರೂನೂ
ಈ ಜನರೆ ನೋಡುವರು, ಜನರೆ ಕಾಣುವರು, ಇದುವು ತಿಳಿಯದೇನು?
ಕಣ್ಣು-ನೋಟ ಇದು ಒಂದರಾಟ ನಾ ತಿಳಿಸಿ ಹೇಳಲೇಕೆ?
ಸಿದ್ಧಸಾಧ್ಯ ಒದ್ದಾಟ ಸಾಕು; ಆಯತಕೆ ಸಿದ್ಧಿ ಬೇಕೆ?
೧೮
ಇದನು ಬಿಟ್ಟು ಅನುಭವದ ಹಾದಿಯಲಿ ಬೇರೆ ಗುಟ್ಟು ಇಲ್ಲ.
ತಾನೆ ದೃಶ್ಯ, ದೃಷ್ಟಾರ ತಾನೆ, ಸಂವಿದ್ರಹಸ್ಯವೆಲ್ಲ,
ಎಂದಿನಂತೆ ಅದು ಇಂದಿಗೂನು ಸಿದ್ಧಾಂತದಾರಪಾರ
ಯಾರು ಹೇಳಿದರು, ಹೇಳದಿದ್ದರೂ, ಸತ್ಯಚಿತ್ತಸಾರ.
೧೯
ಇದ್ದ ಮಾತನ್ನೆ ಹೇಳಲಿಕ್ಕೆ ಬೇಕೇನು, ಗ್ರಂಥ ಹೊಸದು?
ಸತ್ಯ ಮೆಚ್ಚಿ ಮೂಡುವದು ಮಾತು, ಆದನೆಂತು ಅಡಗಿಸುವದು?
ರುಚಿಸಿದ್ದನುಂಡು, ಕಂಡದ್ದೆ ಕಂಡು, ಹಲವೊಲವು ನವ್ಯ ಪ್ರೀತಿ.
ಹಾಡಿದ್ದೆ ಹಾಡಿ, ಹೇಳಿದ್ದೆ ಹೇಳಿ, ರಮಿಸುವದು ರಮ್ಯರೀತಿ.
೨೦
ಹೊಸತೇನು ಇಲ್ಲ ಇದರಲ್ಲಿ, ಅಹುದು ಆಗಿಲ್ಲ ಗುಟ್ಟು ರಟ್ಟು
ತಮ್ಮರಿವೆ ಗುರುವು ತಂತಮಗೆ ಎಂಬೆ, ಪರಮಾತ್ಮ ಎಲ್ಲ ನಿಟ್ಟು
ನಾವೆಲ್ಲರಲ್ಲಿ ತುಂಬಿಹುದ ಕಂಡು ಅಡಗಿರದೆ ಹೊರಗೆ ಬಂದೆ.
ನನ್ನಲ್ಲಿ ತಾವು ತುಂಬಿಹಿರಿ ಎಂದು ಒಳಹೊರಗೆ ಒಂದೆ ಎಂದೆ.
೨೧
ಮುಚ್ಚೇನು ಮತ್ತೆ ಬಿಚ್ಚೇನು ಇಲ್ಲಿ, ಅದು ಇರಲಿ ಯಾಕೆ ಮಾತು?
ಮಧ್ಯಮೆಯ ದಾಟಿ, ಪಶ್ಯಂತಿಯಾಚೆ, ಪರಾವಾಣಿ ಓತು ಹೂತು,
ಬರದೇನು ಮತ್ತೆ ಹುಸಿಮೌನವೇಕೆ, ಮೌನವನೆ ಮೌನವಿರಿಸಿ,
ಜಲಲಿಪಿಯ ತೆರದೆ ಈ ಮಾತನೊರೆದೆ, ಹೃದಯಕ್ಕೆ ಹೃದಯ ತೆರೆಸಿ.

೨೨
ಉಪನಿಷತ್ಸಾರ ಅದು ಕಂಡ ಪಾರ ಇದರೊಳಪಾರವಿಹುದು.
ಇದರಲ್ಲೆ ಬೋಧ ಮುಳುಗಿಹುದು, ಒಳಗೆ ಶೋಧಾರ್ಥ ಮುಳುಗಲಹುದು
ಅಮೃತಾನುಭವದಿ ಶ್ರೀಮಂತನಾಗಿ ಶ್ರೀಜ್ಞಾನದೇವನೆನುವ
ಮನದಿಂದ ಮುಕ್ತ, ಭಗವಂತಯುಕ್ತ, ಸಂಪ್ರಾಪ್ತ ಅಮೃತತನುವ.
೨೩
ಪಡೆದುಣಲು ಬೇಕು, ಮುಕ್ತರಿಗೆ ಸಾಕುಬೇಕೆಂಬುದಿಲ್ಲ ಬಲ್ಲೆ
ಅಮೃತಾನುಭವವು ಬೇಡೆಂಬರುಂಟೆ, ಆ ಮುಕ್ತಯುಕ್ತರಲ್ಲೆ?
ಇದು ವಿಶ್ವನಿಯಮ, ಪ್ರೇಮಕ್ಕೆ ಪ್ರೇಮ ಬರುತಿಹುದು ತಾನೆ ಓತು
ಸೋಜಿಗವದೇನು ? ರುಚಿಸುವದು ತಾನು, ಅಮೃತಕ್ಕೆ ಅಮೃತ ಸೋತು.
೨೪
ದಿನದಿನವು ಒಸಗೆ, ಚಂದಿರನ ಹೊಸಗೆ, ಪೂರ್ಣಿಮೆಯ ಚಂದ್ರ ಬೇರೆ
ಇದು ಹೆಳಬೇಕೆ ಸಮದೃಷ್ಟಿಯವರು, ಅದ ಹೇಳದಿರಲು ಆರೆ
ಅವರವರ ಪ್ರಾಯ ಆ ಕಾಯದಾಯ ; ಆಲಿಂಗಸಂಗದಲ್ಲಿ
ಹೊರಹೊಮ್ಮಿ ಸೂಸಿ, ಒಳಹೊಕ್ಕು ಸೋಸಿ, ಬಹದೇಕರಂಗದಲ್ಲಿ.
೨೫
ಮಧುಋತುವಿನಲ್ಲಿ ಆ ವೃಕ್ಷವಲ್ಲಿ ತತ್ತಳಿತು ಹೂವ ಬಿಟ್ಟು
ದಿಗ್ದೇಶದಲ್ಲಿ ಹೊರಚೆಲ್ಲಿ ಬಹವು ಗಗನಕ್ಕೆ ಮುತ್ತನಿಟ್ಟು
ಈ ಉಕ್ಕು ಏಕೆ, ಅದ ಹೇಳಬೇಕೆ, ಮುಕ್ತರಿಗೆ ಬಿಚ್ಚಿ ಬಿಡಿಸಿ ?
ಅನುಭವದ ಅಮೃತ, ಇರುತಿಹುದು ಸಹಜ, ಎಲ್ಲರಿಗು ಹುಚ್ಚು ಹಿಡಿಸಿ.
೨೬
ಆತ್ಮಾನುಬಂಧ ಆನಂದದಿಂದ ತೊರೆಬಿಟ್ಟು ತುಟಿಗೆ ಚಿಮ್ಮೆ
ಬಿಟ್ಟವರು ಉಂಟೆ ಅಮೃತಾನುಭವದ ರುಚಿಗಂಡಮೇಲೆ ಒಮ್ಮೆ ?
ಅವ ಬದ್ಧನೆಂಬ, ಇವ ಬಿದ್ದನೆಂಬ, ಅವ ಗೆದ್ದನೆಂಬ ಹಸಿಗೆ
ಹುಸಿಹೋಗಿ ಇಲ್ಲಿ ಅನುಭವಕೆ ಬಹದು, ಅಮೃತತತ್ವದೊಂದು ಬೆಸಿಗೆ.
೨೭
ಗಂಗೆಯಲಿ ಬಂದು ತಾನಾಗಿ ಒಂದು ಹರಿದಿಹವು ಹತ್ತು ನೀರು
ಬೇರ್ಕೈವುದೆಂತು ಬಿಸಿಲಲ್ಲಿ ಬೆರೆತ ತಮದೊಂದು ಏರು ಪೇರು?
ಆ ಕ್ಷರದ ಕ್ಷಾರ ಕ್ಷರಿಸುತ್ತಲಿರಲಿ ಅಕ್ಷರವು ಶಾಂತ ಜಲಧಿ
ಸಾಹಿತ್ಯವೆಲ್ಲ ಐವತ್ತು ವರ್ಣ, ಓಂಕಾರ ಸಾರ ಬಲದಿ

೨೮

ಕಸ್ತೂರಿಯಲ್ಲಿ ಒಳಬೆರೆತ ಮಣ್ಣು ಆ ಗಂಧ ತೇಗುವಂತೆ,
ಚಂದನದ ಸಂಗ ಪಡೆದಂಥ ಬೇವು ಬಾವನ್ನವಾಗುವಂತೆ,
ಆ ಲೋಹವೊಮ್ಮೆ ಪರಿಸಕ್ಕೆ ತಾಗಿ, ಪಡೆಯುವದು ಸ್ವರ್ಣರೇಖೆ ;
ಆಪಾದವಾಗಿ ಜ್ಞಾನಾತ್ಮನಲ್ಲಿ ಹೂತಂತೆ ಮುಕ್ತಿಶಾಖೆ.

೨೯

ಅಬಲ ಬ್ರಹ್ಮದಲಿ, ಸಬಲಬ್ರಹ್ಮ ನೆರೆಬೆರೆತು, ಒಂದುಗೂಡಿ,
ಪರಮಾತ್ಮನಲ್ಲೆ ವೈವರ್ತವಾಗಿ ಪರಿಣಮಿಸಿ ವಿಶ್ವಮೋಡಿ,
ಐಶ್ವರ್ಯವೆಲ್ಲ ಮೆರೆಯುತ್ತಲಿರಲು ನಶ್ವರತೆ ಹೋಯಿತೋಡಿ
ಸುಡುಬೆರಳನೆತ್ತಿ ತೋರಿಸುವರಾರು, ಶಿವ-ಶಕ್ತಿ ಬೇರೆ ಮಾಡಿ ?

೩೦

ಅದಕಾಗಿ ಎನುವ ಈ ಜ್ಞಾನದೇವ ಅನುಭವದ ಅಮೃತ ಪಡೆದು
ಸಂಪೂರ್ಣರಾಗಿ ಆ ಬ್ರಹ್ಮವಾಗಿ ಭೌಮತ್ವವನ್ನು ಹಡೆದು
ಮೊದಲಿಹುದು ಮುಕ್ತಿ, ಅನುಭವದ ಭುಕ್ತಿ ಹಬ್ಬಕ್ಕೆ ಹಬ್ಬವಾಗಿ
ಓಬ್ಬೆಂದು ವಿಶ್ವ, ನಲಿದಾಡುತಿರಲಿ, ಆಗರ್ಭವೊಬ್ಬನಾಗಿ.

---

ಭಾವ : ಶ್ರೀ ಜ್ಞಾನೇಶ್ವರರ ''ಅಮೃತಾನುಭವ''ದ ಭಾವಾನುವಾದವಿದೆ.

ಶಬ್ದಾರ್ಥ: ಪಸರ=ಹರಡುವಿಕೆ. ಛವಿ=ಕಾಂತಿ. ಓಜ-ಸಾಮರ್ಥ್ಯ. ನಿಖಿಲ-ಪೂರ್ಣ. ಆಯತ=ಪ್ರಾಪ್ತವಾದದ್ದು. ಸಂವಿತ್=ಜ್ಞಾನ, ಅರಿವು. ವೈವರ್ತ=ಬದಲು, ಕ್ರಾಂತಿ. ಪರಾ, ಪಶ್ಯಂತಿ, ಮಧ್ಯಮಾ, ವೈಖರಿ-ಇವು ವಾಣಿಯ ನಾಲ್ಕು ನೆಲೆಗಳು.

## ೩ ಆನಂದಲಹರಿ

೧

ಮಂಜುವೆಟ್ಟದ ತಂದೆ, ಕಡುಳಿಲೆ ಮುಟ್ಟದನು ತುದಿಬೆರಳಲಿ
ಬೆಟ್ಟದೊಡೆಯನು ಮುದ್ದಿನಲಿ ಪಿಡಿದನು ಸಲಸಲ ಮಡುಳಲಿ
ದುಂಡುಮೊಗಗನ್ನಡಿಯು ಓಡಿಕೆಯು ಹಾಗೆ ಮೆರೆವಿ? ಗದ್ದವ
ಸರಿದೊರೆಯೆ ಇದಕಿಲ್ಲ, ಬಣ್ಣಿಸಿ ಬರೆಯಲೆಂತಿ? ಪದ್ಯವ ?

೨

ತ್ರಿಪುರ ಮುರಿದವನಷ್ಟಿಗೆಗೆ ಮುಳ್ಳಿಡುವ ಮುಮ್ಮುರಿ ಕೋರಳಿದ
ಮೊಗದ ಕಮಲದ ದೇಟು ಜಗದಾಧಾರ ಹೇಗೊ ತೂರಲಿದೆ
ಅಗುರುಧೂಪದ ಹೊಗೆಗೆ ಮಾಸಿದೆ ಅಚ್ಚ ಬಿಳಿಮುತ್ತಿನ ಸರ
ಬೆಂಡುದಂಟಿನ ಗಂಟುಗುಂಡಿನ ಬೆಡಗು ಬಳುಕಿದೆ ಹೊಸತವ

೩

ಅಭಯವರದ ಕರಮುದ್ರೆ ಇಹುದು ಆ ಹಿಂಡುದೈವಗಳಿಗೆ
ಕೊಡುವೆ ನೀನು, ಸುಳಿದಿಲ್ಲ ತಾಯಿ, ಆ ನಟನೆ ನಿನ್ನ ಬಳಿಗೆ
ಭಯವು ಹಿಂಗುವ್ವೊಲು ಮಿಕ್ಕ ಫಲವ ಕೊಡೆ ನೀ ಶರಣ್ಯೆ, ಸಾಕು
ಚರಣದಿಂದಲೇ ಕಾರ್ಯವಾಗುತಿರೆ, ಕರಗಳೇಕೆ ಬೇಕು ?

೪

ಈ ಜಗಲ ಬೆಳಗುವೆನು ಎಂದು ಹಣತಿಯೊಂದೊತ್ತಿ ಎತ್ತುಹುದೆ ?
ಬೆಳುದಿಂಗಳಲ್ಲಿ ಬಸಿಗಲ್ಲ ಸೀಡಿ, ತಿಂಗಳನು ತಣಿಸಬಹುದೆ ?
ಆ ಕಡಲ ತುಂಬಲೆಂದೆನುತ ಹೊಳೆಯು ಹರಿಹರಿವುದೇನು ಹುಚ್ಚು!
ಏ ಮಾತೆ, ನಿನ್ನನೇ ನಿನ್ನ ಮಾತಿನಲಿ ಹೊಗಳಲೇನು ಹೆಚ್ಚು?

೫

ನವನಿಧಿಯೆ, ಏಧಿಯು, ನಿರವಧಿಯೆ, ನಿಚ್ಚ ನಗುವಾಕೆ, ನೀತಿಯುವಳೇ,
ತವನಿಧಿಯ ಅರಿವೆ, ನಲಿನಿಂತ ಚಿತ್ತ, ನೆಲೆವೀಡು ಮಾಡಿದವಳೇ
ನಿಟ್ಟಿಲ್ಲ, ನಿನಗೆ ಕಟ್ಟಿಲ್ಲ, ನಿಗಮ ಗಮಗಮಿಸಿ, ತುಂಬಿದಾಕೆ.
ಪಳಿವಾತ ಜತೆಗೆ ಹೊಸಗೀತವಿದನು ಎಲೆ ತಾಯಿ ಮಾಡು ಜೋಕೆ.

೬

ಹಸುತನದ ಹಾಸ ಬಿಟ್ಟಿಹನು ತನ್ನ ತಾ ನಿನ್ನ ಮೆಚ್ಚುಗೊಂಡು
ಹಿರಿಹಿಗ್ಗನುಂಡು. ಕಾಣುವನು ಕಂಡು, ಚಿರಜೀವಿಯಾಗಿಕೊಂಡು
ನಿನ್ನವನು ರತಿಗೆ ತನ್ನವನು [illegible]
ಹೊನ್ನವನ ಕೈಂಪು ಕರಣಾಗಿ, [illegible]

೭
ಸರಸತಿಯ ಬಾಯ ತಾವರೆಯ ತಂಬುಲದ ಗುಟುಕನೊಂದ ಕುಡಿದು
ಅಗೊ ಹುಟ್ಟುವಮೂಕರೂ ದಿಟ್ಟ ಕವಿಗಳಾಗುವರು ಅಂದು ಹಿಡಿದು
ಅದರಂತೆ ಕೆಂಪು ಅದಕಿಂತ ತಂಪು ಕಾಲ್ತೊಳೆದ ನಿನ್ನ ನೀರು
ಅದನೆಂದು ಕುಡಿದು ಬೆಳೆದೇನು ಎಂದು ಎಳಸುವದು ಜೀವಬೇರು.
೮
ತುಟಿಗೆ ಮಾಟನಗೆ, ಎದೆಯ ತುಂಬ ತುಂಬಿದೆಯ ಕ್ಷೀರಶಾಂತಿ,
ಕಣ್ಣಿನಲ್ಲಿ ಕಂದರ್ಪ, ಮೈಗೆ ಕಡವಾಲ ಮರದ ಕಾಂತಿ
ನಿನ್ನ ಭಕ್ತರಲಿ ನಿನ್ನ ಭಕ್ತಿ ಅವಿಭಕ್ತವಾಗಿ ಮೂಡಿ
ಹರನ ಕಣ್ಗೆ ಕಂಗೊಳಿಸುತಿಹುದು ಭಕ್ತರಲಿ ನಿನ್ನ ಮೋಡಿ.
೯
ಹರನ ಮಡದಿ ನೀ, ಹರಿಯ ಹಿಡಿದೆ ನೀ, ವಿಧಿಯ ಬಿಡದಿ ಎಂದು
ಬಲ್ಲ ಜನರು ಬಲ್ಲಂತೆ ಹೊಗಳಿ ಮೆರೆಯುವರು ಬಲ್ಲೆವೆಂದು
ನಿನ್ನ ನೆಲೆಯು ನಿಲುಕುವದೆ ನುಡಿಗೆ? ಕಂಗಳಿಗೆ ಕವಿಸಿ ಮಾಯೆ
ಮೂರ ಮೀರಿ, ನಾಲ್ಕನೆಯದೇನೊ, ನೀನಾಗಿ ಇರುವೆ ತಾಯೆ.
೧೦
ಹಣವ ಗಳಿಸುತಲೆ ತಾವು ಲಕ್ಷ್ಮಿಪತಿ ಎಂದು ಭ್ರಮಿಸಿಕೊಂಡು
ಕಾವ್ಯ ಕಟ್ಟಿ ವಾಕ್ಪತಿಗಳೆನಿಸಿ ಇರುತಿಹವು ಕೆಲವು ಗಂಡು
ನೀನೆ ಗರತಿ, ಶಿವನೊಬ್ಬ ಬಲ್ಲ ನಿನ್ನಲ್ಲಿ ಇರಲಿ ಬೆರತು
ನಿನ್ನ ಮೈಯ ಮುಟ್ಟುವದು ಪಾಪ, ಗೊರಟಿಗೆಗು ಕೂಡ ಹೊರತು.
೧೧
'ಭವನು ಭವನಕೆ ಬರಲು ಸಂಭ್ರಮದಿದಿರುಗೊಳ್ಳುವ ಕಾಲಕೆ
ಬ್ರಹ್ಮಮಕುಟವ ತಮ್ಮಡಿಯು ತಾಕೀತು, ಹರಿಯ ಕಿರೀಟವ
ಚೂಪುಕುಡಿ ಎಡವೀಯೆ ದಾಟೌ ಇಂದ್ರನೆರಗಿದ ಮಕುಟವ'
ಎನುತ ಪರಿಜನರುಕ್ತಿ ಮೆರೆವುದು ನಿನ್ನ ಹೆಜ್ಜೆಯ ತಾಲಕೆ.
೧೨
ಭವನು ಭವನಕೆ ಬಂದಿರೆ
ನೀನು ವಿಭ್ರಮ ಹೊಂದಿರೆ
ನಿನ್ನ ಜನರು ಪರಾಕು ಹೇಳಿ ವಿಳಾಸ ಸಂಭ್ರಮದಿಂದಿರೆ
'ಬ್ರಹ್ಮಮಕುಟವು ತಾಯಿಯೇ,
ಹರಿಕಿರೀಟವು ಮಾಯೆಯೇ,
ಇಂದ್ರಶಿರ ಶಿವಜಾಯೆಯೇ,
ಎಡವಿಗಿಡವೀ, ತಾಕಿಗೀಕೆ' ಎನ್ನುತೆನ್ನುತ ಮುಂದಿರೆ.

೧೩
ದಿನದ ಸಂಭ್ರಮ ದಿನದಿ ವಿಭ್ರಮ
ಇದಿರುಗೊಳ್ಳುವ ಚಿಂದವೂ
ದಿನದಿನವು ನನ್ನುಸಿರನಾಳಲಿ ಕುಣಿಯೆ ಹೃದಯಸ್ಪಂದವು
ತಮ್ಮಡಿಯ ಆನಂದವು.
೧೪
ಕಸಿರು ಇರದ ರಸದುಂಬಿ ಮನಕೆ ರವಿಶಶಿಗಳಂದ ಮೀರಿ
ಉರಿಯ ಕೆಚ್ಚಲಲಿ ಹಿಗ್ಗಿನೊಂದು ತೆರೆ ಬಂದಹಾಗೆ ತೋರಿ
ಮಿಂಚುಬಳ್ಳಿಯೊಲು ತೆಳ್ಳಮೈಯ ಕಳೆ, ಆರು ಕಮಲ ದಾಂಟಿ
ಹಿರಿಯ ಕಮಲವನದಲ್ಲಿ ಮೆರೆಯುತಿದೆ, ನೂರು ರಸಗಳೀಂಟಿ.
೧೫
ನಿಮ್ಮ ತಿಳಿವಳಿಕೆ ತೆರೆದ ಕಣ್ಣಿನಲಿ ಗೊಂಬೆಯಾಗಿ ನಿಂತು
ನಿದ್ದೆಹೋದ ಕನಸನ್ನೆ ಹೊಸತು ಕನ್ನಡಿಸುವಂತೆ ಬಂತು
ಕಲಿವರಾರು ? ಕಲಿಸುವರದಾರು? ಆ ಕಲಿಕೆ ಕಲ್ಪಿಸುವರೆ !
ಒಲವು ನಲುಮೆಯಲಿ ಬಿತ್ತಬಹುದು, ತಿಳಿವೆಂತು ಕರುಣಿಸುವರೆ ?
೧೬
ತ್ರಿಗುಣಕ್ಕೆ ಹುಟ್ಟಿದ ತ್ರಿಮೂರ್ತಿಗಳು ಮಣಿದಿಹರು ನೀನೆ ಶರಣೆಂದು ಬಗೆದು
ನಿನ್ನ ಅಡಿಬೆಸನಕ್ಕೆ ಇಟ್ಟ ಮಣಿಪೀಠಕ್ಕೆ ತಲೆಗೊಟ್ಟು ಕೈಯ ಮುಗಿದು,
ಪಾದಲೀನರಿಗೇನು ಬೇರೆ ಪೂಜೆಯು ಬೇಕೆ ? ಈ ಗುಟ್ಟು ಭಕ್ತ ಬಲ್ಲ.
ನಿನ್ನ ಪಾದಕೆ ಪೂಜೆ ಸಲ್ಲಿಸಿದ ಕೂಡಲೇ ಸಲ್ಲುವದು ಅವರಿಗೆಲ್ಲ.
೧೭
ನೀನೆ ಶಿವನೊ, ಶಿವ ನೀನೊ ತಾಯೆ, ಸತಿಶಕ್ತಿ ನೀನು ಭಾಪು.
ಮುಡಿಯಲ್ಲಿ ಚಂದ್ರ , ಹಣೆಯಲ್ಲಿ ಕಣ್ಣು, ಮೈಗೆಂಪು ಮಧುರ ರೂಪು.
ಶಿವನ ಆಲಿಂಗಿಸುತ, ಶಿವನ ವ್ಯಾಪಿಸಿಬಿಟ್ಟೆ, ಶಿವನ ಅರ್ಧಾಂಗಿ ಎಂತೊ !
ಎಡದ ಮೈಯನು ತುಂಬಿ ತಣಿವುಗೊಳ್ಳದೆ ಏನೊ ಇಡಿಮೈಯತುಂಬಿ ನಿಂತೊ.
೧೮
ಜಗವ ಬ್ರಹ್ಮ ಪಡೆವನು.
ಹರಿಯ ಉಳಿಸಿ, ರುದ್ರನಳಿಸಿ
ಒಡಲೊಳಡಗಿಸಿಡುವನು.
ಅವನು ಈಶನೆನಿಪನು.

೧೯
ನಿನ್ನ ಹುಬ್ಬ ಸಂಜ್ಞೆಯಿಂದ
ಬಂದ ಒಂದು ಆಜ್ಞೆಯಿಂದ
ಶಿವನು ಇದನು ನೋಡುವ,
ಮೊದಲಿನಂತೆ ಮಾಡುವ.
೨೦
ಇವರು ಜಗದ ಪಂಚಪ್ರಾಣ
ಅವರಿಗೆಲ್ಲ ನೀನೆ ತ್ರಾಣ
ನಿನ್ನ ಹುಬ್ಬ ಹಾರಿಸುತ್ತ
ಜೀವತಮ ನಿವಾರಿಸುತ್ತ;
ಹಡೆವ ಹೊಟ್ಟೆಯಲ್ಲದೇ
ಬೇರೆ ಕರುಳು ಬಲ್ಲುದೇ ?
ಜಗಜಗಂಗಳನ್ನು ನೀನು
ಮತ್ತೆ ಮತ್ತೆ ಕಾಯುವೆ ;
ಪ್ರಾಣವನ್ನು ಈಯುವೆ.
೨೧
ಸುಮ್ಮನಾಗುವ ಬ್ರಹ್ಮ, ಮುರಿದುಬೀಳುವ ಹರಿಯು, ಸಾವಿಗೂ ಯಮಗು ಗಂಟು
ಬೇರುದೆಸೆಯಿಲ್ಲದೆ ಕುಬೇರ ಹೋಗುವ ಕಡೆಗೆ, ಎಲ್ಲರಿಗು ಲಯವು ಉಂಟು.
ದೇವದೇವತೆಯ ದೇವೇಂದ್ರಸಂತತಿಗಳಿಗು ಕೊನೆಗೇನು ಉಳಿವು ಇಲ್ಲ,
ಪ್ರಳಯದಲ್ಲಿಯು ನಿನ್ನನೊಡಗೂಡಿ ಶಿವನೊಬ್ಬ ಅಬ್ಬಬ್ಬ ಉಳಿವನಲ್ಲ!
೨೨
ನಡೆದುದೆ ಪ್ರದಕ್ಷಿಣವು, ಮಾಡಿದುದೆ ಮುದ್ರೆ, ಮಾತಾಡಿದುದೆ ನಿನ್ನ ನಾಮ.
ಉಂಡಿದ್ದು ತಿಂದದ್ದು ನಿನಗೆ ಆಹುತಿ, ನೆಲಕೆ ಉರುಳೆ ದಂಡಪ್ರಣಾಮ.
ಮುಟ್ಟಿದ್ದು ಮೂಸಿದ್ದು ನೋಡಿದ್ದು ಕೇಳಿದ್ದು ಈ ಸಕಲ ಭೋಗದಿಂದ
ಮಾತೃಯೋಗವ ಪಡೆದು ಪೂಜೆಯೆನಿಸಲಿ ನಿನ್ನ ಕೃಪೆಯಾ ಕಟಾಕ್ಷದಿಂದ.
೨೩
ಮರಿದುಂಬಿ ಮಿಂಚುಳ್ಳ ಹುಟ್ಟುಗುರುಳಿನ ನಿನ್ನ
ಮೊಗವು ನಗುವದು ನಲಿನವನ್ನು ಕಂಡು.
ನಗೆ-ಎಸಳು ಪರಿಮಳಿಸೆ ತುಂಬಿಯಾಗೆರಗುವುದು
ಸ್ಮರನ ಮಥಿಸಿದ ಕಣ್ಣು ಮೋಹಗೊಂಡು.

೨೪

ಅಡಿಯಲೊದ್ದೆಯೆಂದು, ನೆಕ್ಕ ಬಂತು ತಳಿತಶೋಕ
ಅಡಿಗೆ ಮೆಚ್ಚಿ ಜೀವದೊಡೆಯ ಕುಳಿತ, ಏನು ಪಾಕ !
ಆ ಮುದ್ದು ಅಡಿಗೆ ಮುದ್ದನಿಡುವನಾವ ಧನ್ಯ !
ನಿನ್ನ ಅಡಿಯ ಮಣೆಯ ಮಾಡಿ, ಮೆಟ್ಟೆ ತಾಯಿ ನನ್ನ!

೨೫

ಅಸರಂತ ಪತಿಯ ಗುಣಕಥನ ಜಪವೆ ಐಶ್ವರ್ಯವಾಗೆ ನಿನಗೆ
ಜಯವಿರಲಿ ಜಿಹ್ವೆಗೆಂದೆಂದು ಜನನಿ ಅದು ಜಪಾಪುಷ್ಪವೆನಗೆ,
ನಾಲಗೆಯ ತುದಿಯೆ ನೆಲೆಯಾದ ಅಚ್ಚಬಿಳಿಹಳಕಿನಂಗದವಳ
ಸರಸ್ವತಿಯ ಮೈ ಮೂರ್ತಮಾಣಿಕವು ಅಹುದು ಕೆಂಡ ಹವಳ !

೨೬

ರಣದಲ್ಲಿ ಜಯಿಸಿ ದೈತ್ಯರನು ಕವಚಿಗಳು ಶಿರಸ್ತ್ರಾಣ ತೆಗೆದು
ಹರನ ಪೂಜ್ಯ ನಿರ್ಮಾಲ್ಯ ಚಂಡನಿಗೆ ಮೀಸಲೆಂದು ಬಗೆದು
ಹರಿಯು ಇಂದ್ರ ತಾರಕನು ಕಪ್ಪುರದ ಕಂಪು ತಂಪು ತಾಗಿ
ಬಯಸಿ ಬರುವರೌ, ತಾಯ ಬಾಯದಂಬುಲದ ಕವಳಕಾಗಿ.

೨೭

ವಿವಿಧ ಪದದಿ ಪುರಹರನ ಹಾಡಿ ಸರಸತಿಯು ಸುರಿಸೆ ಜೇನು ;
'ಲೇಸು ಲೇಸು ಅಹುದಹುದೊ' ಎಂದು ತಲೆದೂಗಲಾಗ ನೀನು ;
ಅಹ ಅದರ ಮಧುರ ಮುಳುಗಿಸಿತು ತಂತಿ ಕಲರವವ ಲವವ ಕಾಣೆ.
ಗವಸಣಿಗೆ ಮುಸುಕು ಹಾಕಿದಳು ವೀಣೆಗಾವಾಗೊ ವಾಣಿ ಜಾಣೆ.

---

ಭಾವ : ಶ್ರೀ ಶಂಕರಾಚಾರ್ಯರ ಕಾಲ-೭೮೦ ರಿಂದ ೮೧೨. ಅದ್ವೈತ ಮತ ಪ್ರತಿಪಾದಿಸಿದವರು. ಭಜಗೋವಿದಂ-ವೊದಲಾದ ಹಲವು ಸ್ತೋತ್ರಗಳನ್ನು ರಚಿಸಿದ್ದಾರೆ. ಅಂಥವುಗಳಲ್ಲಿ ಸೌಂದರ್ಯ ಲಹರಿ-ಆನಂದ ಲಹರಿ ಪ್ರಖ್ಯಾತ. ವಾತ್ಸಲ್ಯ ಭಕ್ತಿಯ ಉತ್ಕಟ ಕಾವ್ಯ. ಅದರ ದರ್ಶನ ಇಲ್ಲಿಯ ಕೆಲವು ಶ್ಲೋಕಗಳಲ್ಲಿ ಕೊಡಲಾಗಿದೆ.

ಶಬ್ದಾರ್ಥ : ಪಡೆಯಲಾಪನು=ಪಡೆಯಬಲ್ಲನು. ಪೊಡಮಡು=ನಮಸ್ಕರಿಸು. ನಿರ್ಜರೆ=ಮುಪ್ಪು ಇಲ್ಲದಂತೆ ಆಗು. ಏಸು=ಎಷ್ಟು ಮೊಗೆ=ಮಣ್ಣಿನ ಚಿಕ್ಕ ಪಾತ್ರೆ. ಹೋರಟೆ-ಪೋರಟೆ=ಹೋರಾಡು. ಹೊಡಕರಿಸು-ಪೊಡಕರಿಸು=ಕಾಣು. ತಮ್ಮಿ=ಪ್ರೀತಿಯ ತಮ್ಮ

## ೪ ಓಮರ

೧

ಗುಡಿಯ ಮಡಿಯ ಪೂಜಾರರಣ್ಣ ನರ್ತಕಿಗೆ ನುಡಿದ ನೊಂದು;
'ಎಲೆ ದುಷ್ಟೆ, ನಷ್ಟೆ, ನೀ ಬೇಟೆಯಾಡುವೆಯೆ ಪ್ರಾಯದವರನೆ'ಂದು
'ಹೌದು ಧಣಿಯೆ, ನಾ ಬಿಚ್ಚುವ್ರೊಗ್ಗೆ, ನನಗಿಲ್ಲ ಸೆರಗು ಮುಚ್ಚು
ತೆರೆದ ಪುಸ್ತಕವು ನನ್ನ ಬಾಳು, ನಿಮಗೇನೊ ಬೇರೆ ಹುಚ್ಚು!'

೨

ನದಿಯ ಮರಳೊ, ಮರದೊಂದು ನೆರಳೊ, ಎಲ್ಲಾದರೂನು ಸರಿಯೆ,
ನನ್ನ ಜತೆಗೆ ನೀ, ನಿನ್ನ ಜತೆಗೆ ನಾ, ಬದಿಗೆ ಹಳ್ಳ ಹರಿಯೆ;
ಹೇಳುತಿರಲು ನೀ, ಕೇಳುತಿರುವೆ ನಾ, ಹಾಡ ನೆನಿಸಿ ಕರೆವೆ;
ನಿನ್ನ ದನಿಯ ಸವಿರಾಗದಲ್ಲಿ ಬೇರಾಗ ಮರೆಸಿ ಮರೆವೆ.

೩

ಪಂಪ ಹುಟ್ಟಿ, ಭಾರತವ ಕಟ್ಟಿ, ಹಿರಿ ಸಿದ್ಧಪದವ ಮುಟ್ಟಿ
ನಿರ್ಜರೆಯ ಪಡೆದ, ನೀ ಮಾತ್ರ ಅದನೆ ಓದುತ್ತ ಕುಳಿತುಬಿಟ್ಟಿ,
ಆ ಪೊನ್ನ, ರನ್ನ, ಜನ್ನರುಗಳಿರಲಿ ; ತೀಡಿದರು ಅದನೆ ಅದನೆ.
ಯಾರಾರೊ ಎಂದು ರಸವಾರಿಹೋಗಿ ಪುಸ್ತಕವೆ ಆಯ್ತು ಬದನೆ.

೪

ಕರ್ನಾಟ ಇರಲಿ, ಕಣ್ಣಾಟ ಇರಲಿ, ಚಿನ್ನಾಟ ಸಾಕುಮಾಡು.
ಮಣ್ಣಾಟ ಬಿಟ್ಟು, ಮನೆ ಕಟ್ಟಿ ನೋಡು, ಸಂಸಾರವಲ್ಲಿ ಹೂಡು
ನಿನಗೆ ನೀನೆ ಮರೆಯಾಗಿ ಚಿಗಿಸು ಹೂತಿರುವ ಹಿಗ್ಗಿನಾಟ.
ಜನನ-ಮರಣಗಳ ಸೂತ್ರದಲ್ಲಿ ನಡೆಸಿರುವ ಗೊಂಬೆಯಾಟ.

೫

ಕ್ಷೀರಸಾಗರದ ಹಾಲಿನಲ್ಲಿ ನಿನಗೂನು ಪಾಲು ಬೇಕು.
ಸಾಕು, ನಿನ್ನ ಶತಕೃತ್ಯದಲ್ಲಿ ಒಂದೆರಡು ಮೂರು ಸಾಕು.
ಜಗದ್ರಂಗದಲಿ ಯಾವ ಪಾತ್ರ, ಕನ್ನಡವು ವಹಿಸಲಹುದು?
ಚೊಕ್ಕ ಹೇಳು, ಬಹುಬಹುದು ಬೇಡ, ನಾಸ್ತಿಕ್ಯ ಸಹಿಸಲಹುದು.

೬
ಹಿಡಿಮಣ್ಣಿನಲ್ಲಿ ಅಡಗಿತ್ತೊ ತಮ್ಮ ಎಂಥೆಂಥ ಮಕುಟ ನೋಡ.
ಕಲ್ಲಿನಲ್ಲಿಹೆಸರನ್ನು ಕೊರೆಸಿ ಚಿರವೆಂದು ನಂಬಬೇಡ.
ಜಯದ ಮದ್ದಿನಲಿ ನಾಮಮೋಹದಲಿ ಭರತನಾದ ಮೂಢ.
ಹೆಸರು ಇರಲಿ; ಮುಳುಗಿಹುದು ಎಲ್ಲೊ ಆ ಹೆಸರ ಗುಡ್ಡ ಕೂಡ.
೭
ಗಾಂಧಿ ಇದ್ದ, ಮತ್ತಾರೊ ಬಿದ್ದ, ಹೊರಬರಲಿ ನಿನ್ನ ಬುದ್ಧಿ.
ದಪ್ಪ ಅಕ್ಷರದ ವಾರ್ತೆ ಬೇಡ, ಬರಿ ವರ್ತಮಾನ ಸುದ್ದಿ.
ಮಣ್ಣು ಹತ್ತದಿರಲೆಂದು ಮೀಸೆಯನೆ ಇಳಿಸಿಬಿಟ್ಟೆ ನೀನು.
ಮುಖಕೆ ಮಸಿಯು ಹತ್ತೀತು. ಇನ್ನು ಮುಂದದರ ಗತಿಯು ಏನು?
೮
ತುದಿಗೆ ತುಟಿಯು ಸೋಕಿದರೆ ಸಾಕು ಝುಂಝುಣತ್ಕಾರವೆದ್ದು
ಮೈಯೆ ನಾದಮಯವಾಗಿ ವೀಣೆಯನು ಸೋಲಿಸುವದು ಗೆದ್ದು.
‘ಕುಡಿಯೊ ಗೆಳೆಯ, ರಸಕೇನು ಕೊರತೆ?’ ಎನುತಿಹುದು ಮಡಕೆ ನೋಡ.
ಒಮ್ಮೆ ಬದುಕಿ ಬಾಳಿತ್ತೊ ಏನೊ ಈ ಮಣ್ಣ ಪಾತ್ರೆ ಕೂಡ!
೯
ಹಾಗೆ ನಗುತಲಿರು, ಕುಂದಬೇಡ, ರಸ ಬೀರುತಿಹುದೆ ಲೇಸು?
ನೀರು ಇಲ್ಲದಲೆ ಒಣಗುತಿರುವ ಸಸಿ ಬಲ್ಲವರದಾರು ಏಸು?
೧೦
ನಮ್ಮ ದುಃಖವೆ ಪಿಂಡಗೊಂಡು ಹಿರಿ ನರಕವಾಗಲಹುದು;
ನಮ್ಮ ಸುಖದ ತಾವರೆಯೆ ಅರಳುತಿರೆ, ಸ್ವರ್ಗವೆನಿಸಬಹುದು.
ಬಾಳ ಸಂಪುಟದ ಪುಟಗಳಲ್ಲಿ ರಸಭಾಗ ತುಂಬ ಮೆಚ್ಚು.
ಇಲ್ಲೆ ಸುಖದ ಸಂಸಾರ ಕಂಡವಗೆ, ಸ್ವರ್ಗವೇನು ಹೆಚ್ಚು?
೧೧
ಹೌದು ಕುಡುಕ ನಾ, ರಸದ ರಾಗವೇ ಉದಯರಾಗವೆನಗೆ.
ಶಾಂತಿ ಶಶಿಗೆ, ಮಾಧುರ್ಯ ಸವಿಗೆ, ಆ ತುಂಬು ಪ್ರಭೆಯು ಇನಗೆ.
ನನ್ನ ಕೈಯ ಪಾತ್ರೆಯನು ಕಸಿದು ಒಡೆಯುವದು ಎಂಥ ಹುಚ್ಚು?
ಬೆಳಕಿನೆಲ್ಲ ಕತ್ತಲೆಯ ಗುಡಿಸುವದು, ಯಾವ ಬಗೆಯ ನೆಚ್ಚು?

೧೨
ಪ್ರಾಯ ತುಂಬಿರಲು, ಪಾತ್ರೆ ತುಂಬಿರಲಿ ಬರಿದು ಭ್ರಾಂತಿ ಏಕೆ?
ಬಾಳ ಕಹಿಗೆ ಕಟುಮಧುರ ಸುರೆಯ ಸರಿಬೆರಕೆ ಬೇಕು; ಜೋಕೆ.
ಸಖಿಯೆ ಸುಖಿಯೆ, ಮದಿರಾಕ್ಷಿ ಸಾಕ್ಷಿ, ಇಲ್ಲೆನುವದೆನ್ನ ಮನವೇ?
ಒಂದು ಮುಗಿದು, ಇನ್ನೊಂದು ಬರಲು, ಮತ್ತೊಂದು ತುಂಬು ಎನುವೆ.
೧೩
ಬದುಕಿರುವವರೆಗೆ ಈ ಘಟವ ನಾನು ಒಟ್ಟೊಂದೆ ಕೆಲಸಕಿಡುವೆ.
ಯಾರದೇನು? ರಸ ಸೋಸಿ ನೋಡುವಾ ಪಾತ್ರೆ ಮಾಡಿಬಿಡುವೆ.
ತಪ್ಪಿ ಒಡೆಯೆ, ಕುಂಬಾರರಣ್ಣ! ಅದ ಮತ್ತೆ ಮಣ್ಣ ಮಾಡು.
ಸುಟ್ಟು, ಕಟ್ಟು, ಕುಡಿವವಗೆ ಮತ್ತೆ ಮೊಗೆ ಮಾಡಿ ಅದನೆ ನೀಡು.
೧೪
ಸಖಿ ಬಾರೆ, ತಾರೆ ರಸಚಷಕ, ನೀನು ಮಧುರವನು ತುಂಬ ತುಂಬು.
ಪಡೆದದ್ದೆ ಉಂಟು. ಉಳಿದದ್ದು ಏನು? ಈ ವರ್ತಮಾನ ನಂಬು.
ತನಿಸುಖದ ತುಟ್ಟತುದಿ ಮುಟ್ಟಿ ನೋಡು, ನರಜನ್ಮ ಸುಲಭವಲ್ಲ.
ಓ, ನಾಳೆ ನೋಡಿದವರಾರು? ಮುಂದಿನಾ ಕ್ಷಣವೆ ನೆಚ್ಚಿಗಿಲ್ಲ.
೧೫
ವಿಧಿಯು ತನ್ನ ನವವೇದ ಬರೆದು ಹೊತ್ತಿಗೆಯ ಮುಗಿಸುವಂದು
ಹೇಳೇನು ಹೊಸತು ಆವೃತ್ತಿಯಲ್ಲಿ ಹಳೆಕಥೆಯು ಬೇಡವೆಂದು.
ಎಲೊ ಬರೆಹಗಾರ ಈ ನಮ್ಮ ಪುಟಕೆ ಮತ್ತೆರಡು ಚಿತ್ರ ಬೇಕು.
ಮರಣ ಮುಸುಕದೊಲು ಹೆಸರನುಳಿಸು,-ಅದು ಇಲ್ಲ,-ತೊಡೆದುಹಾಕು.
೧೬
ಈಸಣ್ಣ ಹೌದು, ಬಸವಣ್ಣ ಹೌದು, ಮುಂದೇನು ಹೇಳು ಮಗನೇ.
ಆ ನಿನ್ನ ತಾಳದಲಿ ನೀನೆ ಕುಣಿದೆ ಸರಿ, ರಚಿಸಿದವನು ನಗನೇ?
ಒಳತೋಟಿಯಲ್ಲಿ, ಹೋರಟೆಯು ಮಸಗಿ, ನವಧರ್ಮಮೇಘ ಹೊಮ್ಮಿ
ಮಿಂಚು ಹೊಡಕರಿಸಿ, ಗುಡುಗು ಬಂತು, ಬರಿ ವಚನವಲ್ಲ, ತಮ್ಮ!
೧೭
'ಕಣ್ಣು ನನ್ನದೇ? ಮನವು ನನ್ನದೇ? ಜಿಹ್ವೆ ನನ್ನದೇನೇ?
ನಿನ್ನದಯ್ಯ ಶಿವ' ಎಂದು ಬಾಳಿದನು ತನ್ನದೆನ್ನದೇನೆ!
ತನ್ನ ಮರೆವಿಗೇ ತನ್ನ ಅರಿವಿನಲಿ ನಕ್ಕ ವಿಶ್ವಬಂಧು.
ನೀನು ನಕ್ಕರದು ಅಕ್ಕರಹುದೆ?-ಸರ್ವಜ್ಞ ನಕ್ಕನೆಂದು.

೧೮
ರಸವೆಂದರೇನು, ಮಧುವೆಂದರೇನು, ಸುರೆ-ಸೋಮವೆಂದರೇನು ?
ಸಂಸ್ಕೃತವೆ ಇರಲಿ, ಪ್ರಾಕೃತವೆ ಬೇಕೆ, ಅದರರ್ಥ ಒಂದೆ ತಾನು.

೧೯
ಏನು ತಾಪವದು, ಯಾವ ಶಾಪ, ಎಲೊ ಎಲವೊ ಪಾಪಶಂಕಿ?
ರಸ ಕುಡಿದು ನೋಡು, ಮಧುಗೀತ ಹಾಡು, ಸರಿ ಹೊತ್ತಿಸಲ್ಲಿ ಬೆಂಕಿ.
ಈಗ ಇತ್ತು ಈಗಿಲ್ಲ, ಇದರ ಪರಿ ಯಾರಿಗೇನು ಗೊತ್ತು?
ರೆಕ್ಕೆಗೆದರಿ ಕುಳಿತಿರುವ ಹಕ್ಕಿಗೊ ಹಾರಲೆಷ್ಟು ಹೊತ್ತು?

೨೦
ಕಿರಣಕಿರಣಕೂ ಹರಣ ತೆರೆದು ಶರಣಾರ್ತಿ ಎಂದ ಬಣ್ಣ
ಮಣ್ಣು ಬದುಕಿರಲಿ, ಕಣ್ಣು ಬೆಳಕೆನಿಸಿ, ಮಣ್ಣುಗೂಡಿತಣ್ಣ.
ಇಂದೆ ಬೆಳಗು ಅರಳಿರುವ ಹೂವು ಅಕೊ ಸಂಜೆಹೊತ್ತಿಗಿಲ್ಲ.
ರಾಮ-ರಾವಣರು, ಕೃಷ್ಣ-ಕಂಸರೂ ಕೊನೆಗೆ ಹೋದರಲ್ಲ.

---

ಭಾವ : ''ಓಮರನ ಉಕ್ತಿಗಳು'' ಕನ್ನಡ ವಾಚಕರಿಗೆ ಪರಿಚಿತವಿವೆ. ಆ ಉಕ್ತಿಗಳೂ, ತತ್ಸದೃಶ ಸ್ವತಂತ್ರ ಉಕ್ತಿಗಳಲ್ಲಿ ಕೆಲವೂ ಇಲ್ಲಿ ಕೊಡಲಾಗಿವೆ.

ಶಬ್ದಾರ್ಥ: ಅಗರು-ಅಗಿಲ್=ಒಂದು ಜಾತಿಯ ಸುಗಂಧದ ಮರ. ಬೆಂಡು=ದಂಟಿನ ಒಳಭಾಗ. ಬಸಿಗಲ್ಲು=ಚಂದ್ರಕಾಂತಶಿಲೆ-ಬೆಳುದಿಂಗಳಲ್ಲಿ ದ್ರವಿಸುವ ಕಲ್ಲು. ನಿರವಧಿ=ಮಿತಿ ಇಲ್ಲದ. ತವನಿಧಿ=ನಾಶವಾಗದ ಸಂಪತ್ತು. ನಿಟ್ಟು=ದಿಕ್ಕು,ದೆಸೆ. ನಿಗಮ=ಮಾರ್ಗ. ಗೊರಟಿಗೆ=ಅಲಂಕಾರದ ಹೂ. ಆರುಕಮಲ=ಷಟ್‌ಚಕ್ರ. ಒಲವು=ಶ್ರದ್ಧೆ. ನಲುಮೆ=ನಲ್ಮೆ, ಸ್ನೇಹ, ಗೆಳೆತನ. ಅಡಿಬೆಸನ=ಪಾದಸೇವೆ. ಜಪಾಪುಷ್ಪ=ಕೆಂಪು ಹೂ, ಮೂಡಲ ದಿಕ್ಕಿನ ಸಂಕೇತದ ಹೂ.

# ೫ ಬೆಳಗುಜಾವ

೧

ಏಳು ಚಿನ್ನ, ಬೆಳಗಾಯ್ತು ಅಣ್ಣ, ಮೂಡಲವು ತೆರೆಯಿ ಕಣ್ಣ
ನಕ್ಷತ್ರ ಜಾರಿ, ತಮವೆಲ್ಲ ಸೋರಿ, ಮಿಗಿಲಹುದು ಬಾನ ಬಣ್ಣ
ಜೇನ್ನೊಣದ ಹೆದೆಗೆ ಹೂಬಾಣ ಹೂಡಿ ಝುಂ ಎಂದು ಬಿಟ್ಟ ಮಾರ.
ಗುಡಿಗೋಪುರಕ್ಕೆ ಬಲೆ ಬೀಸಿ ಬಂದ, ಅಗೊ ಬೆಳಕು-ಬೇಟೆಗಾರ.

೨

ನಿಶೆಯಿಳಿದ ಉಷೆಯ ಎಳನಗೆಯ ಬಗೆಗೆ ಸೋತಿರಲು ಜಗವು ಸವಿಗೆ
ಕಣ್ಣೆದಿರು ಒಂದು ಕಟ್ಟಿತ್ತು ಕನಸು; ಕೂಗೊಂದು ಬಂತು ಕಿವಿಗೆ;
ಮಕ್ಕಳಿರ ಕೇಳಿ, ರಸ ಕುಡಿಯಲೇಳಿ, ಹುಸಿನಿದ್ದೆಗಿದ್ದೆ ಸಾಕು.
ಈ ತುಂಬಿಬಾಳು ತುಂಬಿರುವ ತನಕ, ತುಂತುಂಬಿ ಕುಡಿಯಬೇಕು.

೩

ಯಾವಾಗೊ ಕೋಳಿ ಕೂಗಿಹುದು ಏಳಿ, ತಡವೇಕೆ ಪಾನಕೇಳಿ.
ಮೊದಲಾಗಲೀಗ, ಅಂಗಡಿಯ ಕದವ ಈ ಕ್ಷಣಕೆ ತೆರೆಯ ಹೇಳಿ.
ಜೀವನದ ನದಿಗೆ ಸೆಳವಿಹುದು, ಮರಣ ಬಂದೀತು ಕ್ಷಣವು ಉರುಳಿ
ಹೋದವರು ತಿರಗಿ ಬಂದಾರೆ? ಅವರು ಬರಲಿಕ್ಕ ಇಲ್ಲ ಮರಳಿ.

೪

ಬಾನ್ ಹೊಗರಲುಂಟು, ಮರ ಚಿಗುರಲುಂಟು, ಬರಲುಂಟೆ ಸುಗ್ಗಿ ಮತ್ತೆ?
ಮುಳುಗಿರಲಿ ಮುಪ್ಪು ಚಿಂತನದಿ; ತಾನು ಹರೆಯಕ್ಕೆ ಬೇರೆ ಹೊತ್ತೆ?

---

ಭಾವ : ಓಮರನ ಉಕ್ತಿಗಳ ಪ್ರೇರಣೆಯಿಂದ ರಚಿತವಾದ ಸುನೀತ.

ಶಬ್ದಾರ್ಥ : ಮಾರ=ಕಾಮ, ಮನ್ಮಥ. ಹೊಗರು=ಕಾಂತಿ.

## ೬ ಏಳಣ್ಣ

೧

ಏಳಣ್ಣ ಬೆಳಗಾಯ್ತು; ತಮವು ತಳವೆಳಗಾಯ್ತು;
ಚಿಕ್ಕೆಗಳ ಬಳಗವೂ ಕರಗಿಹೋಯ್ತು.
ಮೂಡಲದ ಬೇಡ, ಬಂಗಾರ ಬಲೆ ಬೀಸಿರಲು
ಗುಡಿಯ ಗೋಪುರವು ಹೊಂಬಣ್ಣವಾಯ್ತು.

೨

ಕತ್ತಲೆಯ ಬಾಚುವೊಲು ನಸುಕು ಕೈಚಾಚಿರಲು
ಕನಸಿನಲೆ ಕೇಳಿದೆನು ಕೂಗನೊಂದು:
'ಏಳಿರೈ ಮಕ್ಕಳಿರ, ತುಂಬಿ ಕುಡಿಯಿರಿ ಮಧುವ
ಬದುಕು ಬರಿದಾಗುವದರೊಳಗೆ' ಎಂದು.

೩

ಅತ್ತ ಕೂಗಿತು ಕೋಳಿ, ಇತ್ತ ಕೂಡಿತು ಜನವು,
ಸಾಗಲೆಂದಿತು ಈಗ ಪಾನಕೇಳಿ
ಕಾಲ ಕಳೆಯಲು ಸಲ್ಲ, ಮರುಚಣವು ಹೋದೇವು
ಇತ್ತ ಬರಲಿಕ್ಕಿಲ್ಲ ಮತ್ತೆ ಮರಳಿ.

೪

ತುಟಿಗೆ ಮುದ್ದು ಸುರೆ, ತುಟಿಗೆ ಮುದ್ದು ಪ್ರಿಯೆ, ತುಟಿಗೆ ಮುದ್ದು ಹಾಡು.
ಕೊರಳೊಳಿಳಿದು ಎದೆಬದಿಗೆ ಸುಳಿದು ಬೇಡಿದ್ದ ಕೊಡುವೆ ಬೇಡು.
ಹಾರದಲ್ಲಿ ವ್ಯಾಪಾರವಿಲ್ಲ ಅರಿ ಜೀವ ಜೀವಬಂಧು.
ಕೊಡುವದೇನು, ಕೊಳ್ಳುವದು ಏನು, ಅವು ಒಂದರೊಳಗೆ ಒಂದು.

೫

ಕೆಟ್ಟೆಯಣ್ಣ ನೀ, ಧರ್ಮಶಾಲೆಯನು ಮನೆಯು ಎಂದು ನಂಬಿ.
ಎಷ್ಟು ಶಾಂತಿ ಎಷ್ಟೊಂದು ಭ್ರಾಂತಿ ಇದು ಕೂಡ ಮಣ್ಣಗೊಂಬಿ.
ರಸವೆ ಬಾಳು, ಉಳಿದೆಲ್ಲ ಹಾಳು; ಆ ಸಾಕ್ಷ್ಯ ಬೇರೆ ಬೇಕೆ?
ಸುಖದ ಸಾರವನು ತಿಳಿಯದವಗೆ ಬದುಕಿದ್ದನೆಂಬುದೇಕೆ?

---

ಭಾವ : ಓಮರನ ಉಕ್ತಿಗಳ ಪ್ರೇರಣೆಯಿಂದ ಬರೆದ ಕವನ. ವ್ಯಸನ ಮುಕ್ತಿಯಾಗದೆ ಸುಖದ ಸಾರ ತಿಳಿಯದು ಎಂಬ ಸೂಚನೆ ಇದೆ.

ಶಬ್ದಾರ್ಥ : ತಳವೆಳಗಾಗು=ವಿಸ್ಮಯಕಾರಕ ಬದಲಾವಣೆ ಹೊಂದು. ರಸ=ಜ್ಯೋತಿ, ಬೆಳಕು. ಹಾರ=ಬಯಕೆ.

# ೭ ಈಶ

೧
ಇದರೊಳಿರುವನೀಶಲೆನಲೇ
ಎಲ್ಲವೆಲ್ಲ ಇಳೆಯೊಳಲೆ
ಬಿಟ್ಟುಕೊಟ್ಟು ಪಡೆದು ಉಣ್ಣು
ಬೇಕೆ ಏಕೆ ಬೇರೆ ಹೊನ್ನು?
೨
ದುಡಿದು ಮಾಡು ಇಲ್ಲೆ ಇಳೆ
ಬದುಕು ನೂರು ಬಾಳು ಬೆಳೆ
ಇದುವು ನಿನ್ನ ಹಾದಿ; ತನ್ನ
ಮಾಟ ಮೆತ್ತಿಕೊಳ್ಳದಣ್ಣ.
೩
ಕುರುಡುಗತ್ತಲುಳ್ಳ ನಾಡು
ಸೂರ್ಯನಿರದ ಕಪ್ಪುಗಾಡು
ತನ್ನ ಕೊಂದುಕೊಂಬ ಜನ.
ಭಾವವಿರದ ತನನನ.

---

ಭಾವ : ''ಈಶಾವಾಸ್ಯ'' ಮಂತ್ರದ ತುಣುಕು. ಪೃಥ್ವಿಯಲ್ಲಿ ಇರುವ ಸ್ಥಾಯಿಗುಣದ ಮೇಲ್ಮೆ ಸಾರಲಾಗಿದೆ. ಭೂಮಿಯೆ ಚಿನ್ನ ಎಂಬ ಭಾವವಿದೆ.

ಶಬ್ದಾರ್ಥ : ಇಳೆ=ಭೂಮಿ, ಅನ್ನ, ಉತ್ತಮಸ್ಥಿತಿ.

# ೮ ಕಾಳಿದಾಸ

೧

ನಾನೊಬ್ಬನುಂಟು ಹಲವಾಗಲೆಲ್ಲೊ ಎಂಬ
ಹಂಬಲಿನ ಹಂಬೆ ಹರಿಬಳ್ಳಿವಳ್ಳಿಗಳಾಗಿ
ತನ್ನ ದಾಂಗುಡಿಯ ಗೊನೆ ಬಾನು ಮಣ್ಣೊಂದಾಗಿ
ಒಂದಾಗಿ ಕೆಲವಾಗಿ ಇರುವ ಹರುಹಿನ ತುಂಬ
ನಲಿವುಲಿವು ಒಲುಮೆ ಸೆಲೆ ಚೆಲುವು ಹಂದಿರಗಂಬ-
ವೆನೆ ತಾನೆ ಹೂ, ಹಕ್ಕಿ, ಹೆಣ್ಣು ಕಣ್ಣೆಂದಾಗಿ
ನೀಡಿ ಬಾನ್‌ಮೀನಂಗಳಲ್ಲು ಚಳಮಿಳನಾಗಿ
ಆಗ ಬಗೆಬಗೆ ಮಿಂಚಿತ್ತು ಒಂದೇ ಬಿಂಬ.
ಕಣ್ವ ಕವಿಗಣ್ಣ ಕನ್ನಡಿಯಲ್ಲಿ ಒಳಮೂಡಿ.

೨

ಆ ಕಾವ ನೋವೆ ಹಲವೊಲವಿನಲಿ ಹಾಡಾಗಿ
ಯಾವುದೋ ಹಿರಿಬೆಳಕ ಮಿಸುಕಾಟವೇ ಹಿಗ್ಗಿ
ಇಲ್ಲದುಂಟಾಗಿ ಕತ್ತಲೆಯು ಬೆಳಕಿಗೆ ಬಾಗಿ
ಸಾವು ಸುಲಿಯಲು ಬಾಳೆ ತಿಳಲು ಎನೆ ಸವಿಗೂಡಿ
ಮುದ್ದಾಟವೆನೆ ಬಂತು ಕಾಳಿದಾಸನ ಸುಗ್ಗಿ.



---

ಭಾವ : ಕಾಳಿದಾಸನಲ್ಲಿ ಅವತರಿಸಿದ ಶಕ್ತಿಯನ್ನು ಕುರಿತು ಬರೆದದ್ದು.

ಅರ್ಥ : ಹಂಬೆ-ಹಂಬು=ಬಳ್ಳಿ. ದಾಂಗುಡಿ=ಬಳ್ಳಿಯ ಬೆಳವಣಿಗೆಯ ಮುಂಭಾಗದ ತುದಿ.
ಚಳಮಿಳ=ಚಂಚಲವಾಗಿ ಹೊಳೆ. ಮಿಸುಕಾಟ=ಚಲನೆ.

## ೯ ಓ ಸುಮ್ಮನಿರು ಓ ಮಾತೆ !

೧

ಸುಮ್ಮನಿರು ಓ ಮಾತೆ ! ಭಾವಗೀತ ಪುನೀತೆ
ಓ ಜಾತೆ, ಓ ಮಾತೆ, ಓ ಆತ್ಮಸುಪ್ರೀತೆ,
ನೋಡಿದರು ತಿಳಿಯದಾ ಗೂಢ ಹೇಳಿದರೇನು ?
ತಾನಾಗಿ ಬಿಡುವನಕ ತೊಡಕು ನಾನೂ ನೀನು.

೨

ರಾಗವೆಳೆದರೆ ಭಾವದಾವೇಶವಾದರೂ
ಮಾತೆಂಬುದೆಂದಿಗೂ ಅರ್ಥರೂಪದ ಬೆದರು.
ನಾದವೂ ವಾದವೂ ಬರಲು ಇದಿರಾ ಇದಿರು
ಒಂದು ಒಂದನು ನುಂಗೆ, ಕೊಳಲು ಹುಸಿಹಸಿ ಬಿದಿರು.

೩

ಓ ಅನಿರ್ವಾಚ್ಯವೇ, ನಿನ್ನ ವಾಚ್ಯತೆಗೆಳೆದು
ಗಾಳಿಯೊಡ ಗುದ್ದಾಡಿ ಮೈಯ ನೋಯಿಸಿಕೊಂಡೆ
ಎಂಬ ಹುಂಬನ ಕುರುಡುನಂಬಿಗೆಯ ಪಾಂಗಾಯ್ತು,
ಸಾಧ್ಯಸಾಧನೆಯಲ್ಲಿ ಒಗೆತನದ ಹಗೆಯುಳಿದು.

೪

ಇಂದಿಲ್ಲ ಒಂದು ದಿನ ಬಂದೀತು ಮೊಳೆಗೊಂಡೆ
ಅಂದೆ ಮೌನದ ನೋಂಪಿ ತಾನು ಹರಿ-ಹಂಗಾಯ್ತು.

---

ಭಾವ : ಮೌನದ ಧಾರಣೆಯಲ್ಲಿ ಅದರ ಪಾರಣೆಯನ್ನು ಕುರಿತು ಬರೆದ ಸುನೀತ.

ಶಬ್ದಾರ್ಥ : ಅನಿರ್ವಾಚ್ಯ=ವರ್ಣಿಸಲಸಾಧ್ಯವಾದ. ಪಾಂಗು=ರೀತಿ, ಕ್ರಮ, ಆಕಾರ. ಒಗೆತನ=ಕೂಡಿಬಾಳುವೆ ಮಾಡುವದು. ಹಂಗು=ದಾಕ್ಷಿಣ್ಯ, ಋಣ. ಹರಿಹಂಗಾಗು=ಮಾತಾಗು, ಸ್ಪಷ್ಟವಾಗು.



# ೧೦ ಸಾಕ್ಷಿ

೧

ಇರುವೆನು ಎನ್ನುವ ದೇಹದ ಅರಿವೇ
ಈಗೋ ಆಗೋ ಎಣಿಸುತಿದೆ.
ಅರಿವೆನು ಎನ್ನುವ ಮನದ ಪರಿವೆಯೇ
ಅಹುದೊ ಅಲ್ಲವೋ ಎನಿಸುತಿದೆ.

೨

ಉಸಿರುಸಿರಿಗೆ ಹೊಯ್ದಾಡುವ ಪ್ರಾಣ
ಕಂಠದಿ ಕುಂಠಿತವಾಗುತಿದೆ.
ಬೆಳಕು, ಬಿಸಿಲ, ಬೆಳುದಿಂಗಳ ಇರುಳಿಗೆ
ಬೆಳೆಯುವದೇನೋ ಸಾಗುತಿದೆ.

೩

ಕಂಡೂ ಕಾಣದೆ ಕಾಣದ ಬದುಕೂ
ಹಾಗ್ಹಾಗೇ ಒಳವಾಗುತಿದೆ.
ಹೊಮ್ಮರ ಹೆಮ್ಮರ ಹಬ್ಬಿದೆ ಬಯಲಲಿ
ಪಾದಪ ಅಡಿಯಲಿ ಬಾಗುತಿದೆ.

೪

ನಿಮ್ಮ ಕಣ್ಣು ರವಿಚಂದ್ರ ಬೆಳಗುತಿರೆ
ಜೀವಚುಕ್ಕೆ ನೆರವಾಗುತಿದೆ.

---

ಭಾವ : ಪ್ರತಿಯೊಬ್ಬರಲ್ಲಿ ಅವರವರ ಜೀವನ ಚರಿತವನ್ನು ತಾಟಸ್ಥ್ಯದಿಂದ ನೋಡುವ ಒಂದು ತನ್ಮಯ ನಯನವಿದೆ. ಆ ನಯನದ ಸುಳುವುಹೊಳವಿನ ಎಚ್ಚರ ಆಗೀಗ ಮಿಂಚಿಹೋಗುವದು.

ಶಬ್ದಾರ್ಥ : ಕುಂಠಿತ=ಕುಗ್ಗಿದ, ತಡೆಯಲ್ಪಟ್ಟ, ಮಾಗು=ಪಕ್ವವಾಗು, ಹಣ್ಣಾಗು. ಪಾದಪ=ಬೇರಿನಿಂದ ನೀರು ಕುಡಿಯುವುದು-ಮರ.

# ೧೧ ಜೀವದ ತತ್ತಿ

೧

ಎರಡು ಹೆಜ್ಜೆಗಳಲ್ಲಿ
ಮೂರು ಲೋಕವ ತುಂಬಿ
ಮೂರಕ್ಕೆ ಬಲಿಯ ತಲೆ ಮೆಟ್ಟಿ ನಿಂತೆ
ಎಲೆ ಜೀವದೇವ ಆ
ಲೀಲೆ ಆಗದೊ ಇಲ್ಲಿ
ಎಂತು ಅಲ್ಲಾಗಿತ್ತೊ ಇಲ್ಲಿ ಅಂತೆ.

೨

ಜೀವದೀ ತತ್ತಿಯಲಿ
ದೇವನೆಂಬೀ ಹಕ್ಕಿ
ಕಾವನುಣ್ಣುತ ಕಾದುಕೊಂಡೆ ಇಹುದು
ತಂದೆ ಹಕ್ಕಿಯ ಕರೆಗೆ
ತಾಯಿ ರೆಕ್ಕೆಯ ಮರೆಗೆ
ಬಾಯಿದೆರೆದೋಂಕರಿಸಿ ಬೇಗ ಬಹುದು.

೩

ಫಲದ ಹೊಟ್ಟೆಯ ಬೀಜ
ನೆಲದ ಬಸಿರೊಳು ನಾಟಿ
ಮರ ಬೆಳೆದು ಹಣ್‌ಬಿಟ್ಟು ಎರ ಎರಗುವಂತೆ
ದಿವ್ಯ ಮನ್ವಂತರದ
ಭವ್ಯತೆಯ ಉದಯದಲಿ
ಗುರುವೆ ಅವತರಿಸೆನ್ನ ಹೃದಯದಲ್ಲಿ.

---

ಭಾವ : ಬೀಜದಿಂದ ಮರ ಹುಟ್ಟಿ ಫಲ ಕೊಡುವುದು ಪ್ರತ್ಯಕ್ಷ ಅನುಭವ. ಅದೇ ಮಾದರಿಯಲ್ಲಿ ಗುರುವೆ ಹೃದಯದಲ್ಲಿ ದೇವ ಬೀಜಬಿತ್ತಿದ ಅನುಭವಕ್ಕಾಗಿ ಅಭೀಪ್ಸೆ ಪಡುವ ಕವನ.

## ೧೨ ವಿಶ್ವ ಒಂದು ಅಶ್ವ

೧

ಘುರ್‍ರೆ ಘುರ್‍ರೆ ಘೋಟಕಾ
ನಡೆ ಅಂತಃಸ್ಫೋಟಕಾ
ಪಂಚಸ್ಥಿತಿ, ಪಂಚಗತೀ
ಕಾಲ ಕುಣಿತದಂತೆ ರೀತಿ
ನನಗೆ ನಿನಗೆ ಸಮನೆ ಪ್ರೀತಿ
ಕುದುರಿ ಸಾಗು ಗುರಿಯೆಡೇ
ಕುರಿಯಬೇಡ ಎಡೆತಡೇ-ನಡೇ ನಡೇ ನಡೇ.

೨

ಉಸಿರು ಛಂದ ದೀರ್ಘಹ್ರಸ್ವ
ನನ್ನ ವಿಶ್ವ ಆತ್ಮದಶ್ವ
ಪ್ರಾಣವೇರಿದಂತೆ ಮನಾ
ಗುರುವೇರಿದ ತನ್ನತನಾ
ಕೈಮೈಗಳ ಗೈಮೆಯಲ್ಲಿ
ರೂಪಿಸುವದು ರೂಪಕಾ-
ತಿಳಿಯಬಹುದು ಹೊಳೆಯಬಹುದು
ಅಳೆಯಬಹುದೆ ಮಾಪಕಾ ?

೩

ಹೈ, ಹೈ, ಹೈ; ಸೈ, ಸೈ, ಸೈ.
ಅಹಾ ಮೋಕ್ಷದಾಯಕಾ
ಗುರಿಯು ಕಂಡ ಸಾಯಕಾ
ಓಹೊ ಜೀವನಾಯಕಾ
ಘುರ್‍ರೆ ಘುರ್‍ರೆ............

---

ಭಾವ : ದೃಶ್ಯ ವಿಶ್ವದ ಪಸರ ಜಗದ್ಗತಿಯಲ್ಲಿರುವ ಒಂದು ಅಶ್ವ ಅದನ್ನೇರಿದ ನಮ್ಮ ಪ್ರಾಣ ಅಶ್ವಾರೋಹಿ ಪ್ರಾಣವೂ ಅಶ್ವವಾದಾಗ, ಮನ ಅದನ್ನೇರುವುದು. ಮನವನ್ನು ಜ್ಞಾನ ಏರುವುದು. ಹೀಗೆ ಕುದುರೆಯ ಮೇಲ ಕುದುರೆ, ಅಶ್ವಾರೋಹಕನ ಮೇಲೆ ಅಶ್ವಾರೋಹಕ. ಹೀಗೆ ತರಗತಿಗಳಿವೆ.

ಶಬ್ದಾರ್ಥ : ಮಾಪಕಾ=ಅಳೆಯುವ ಸಾಧನ. ಸಾಯಕಾ=ಬಾಣ, ಖಡ್ಗ. ಘೋಟಕ=ಕುದುರೆ.

# ೧೩. ಪಂಚಮುಖ

೧

ನೈಜಕ್ಕಿದೆ ಪಂಚಮುಖ
ಐದರೊಳಿದೆ ನೈಜಸುಖ
ಒಂದರೊಳಿಲ್ಲೋ ಎಲ್ಲಾ, ಎಲ್ಲಾ ಒಂದೊಂದುಃ
ಒಂದೇ ಅದು ಐದಾಗಿದೆ
ಐಬೆರಳಿನ ಕೈದಾಗಿದೆ
ಮರತುದಿಗಿದೆ ಹಲ ಹೂ ಹೂ, ಬುಡಕಿದೆ ಬೇರೊಂದು.

೨

ಹೊರಗೆಲ್ಲೋ ಬಾನಾಗಿದೆ
ಒಳಗಿಲ್ಲೇ ನಾನಾಗಿದೆ
ಕಣ್ಣದಿರಿನೊಳೆಲ್ಲೆಲ್ಲೂ ಅಗೊ ಒಡವೆಯೆ ಒಡವೆ.
ಅಲ್ಲೂ ಇಲ್ಲೂ ಒಂದೇ
ಕಣ್ಣಲ್ಲೂ ಕಣ್ಮುಂದೆ
ಈ ತುದಿ ಆ ತುದಿ ಬೆಳಕೇ ಬೆಳಕೇ ನಡುನಡುವೆ.

---

ಭಾವ : ಪಂಚಮುಖ-ಪಂಚಮಹಾಭೂತ ಪ್ರಪಂಚದ ಒಳಗೊಂದು ಆತ್ಮಕೇಂದ್ರವಿದೆ. ಆದರ ಸ್ಪರ್ಶ, ಭಾವ ಮತ್ತು ಬುದ್ಧಿಗೆ ಆಗೀಗ ಆಗಬೇಕೆಂಬ ಅಭೀಪ್ಸೆ.

ಶಬ್ದಾರ್ಥ : ಕೈದು=ಆಯುಧ.



# ೧೪ ಕನ್ನಡದ ಕಮಳ

೧

ಕನ್ನಡದ ಕಮಳವದೊ ಅಷ್ಟದಳವಾಗಿಹುದು
ಕ್ಷೇತ್ರದಳ ಕ್ಷೇತ್ರಿದಳ ಜೀವದಳವು.

೨

ಬ್ರಹ್ಮದಳ ಶೇಷದಳದಲಿ ದಳವನರಳಿಸುತ
ವಾಯುದಳವಾದ ಕರ್ನಾಟ ದಳವು.

೩

ದಾಸದಳ, ವತ್ಸದಳ, ಮಿತ್ರದಳದೊಂದಿಗೇ
ಮಾಧುರ್ಯ ದಳವೊಂದು ಬಿಡಿಸುತಿರಲು.

೪

ಕರ್ಣಿಕಾಮಧ್ಯದಲಿ ಹಂಸವೆಚ್ಚತ್ತಿಹುದು,
ನವಚತುರ್ದಳಗಳನು ಮೀರುತಿಹುದು.

೫

ಬಾನ್ಮೈಯೆ ಕದಿರ ಗರಿಗರಿ ಬಿಚ್ಚಿ ನಿಮಿರಿರಲು
ಚೈತ್ಯದಾಕಾಶದಲಿ ಏರುತಿಹುದು.

---

ಭಾವ : ಕನ್ನಡದ ಅಷ್ಟಾಂಗಗಳಲ್ಲಿ ಒಂದೊಂದು ಶಕ್ತಿಯ ಕುರುಹು, ದರ್ಶನ ಮಿಂಚಿದಾಗ ಕಂಡ ಕವನ.

ಶಬ್ದಾರ್ಥ : ಕ್ಷೇತ್ರ=ದೇಹ. ಕ್ಷೇತ್ರಿ=ಜೀವ. ಕರ್ಣಿಕಾಮಧ್ಯ=ಕಮಲದ ನಡುವಿನ ಭಾಗ, ಬೀಜಕೋಶ. ನವಚತುರ್ದಳ=ನಾಲ್ಕು ಪಕಳೆಗಳುಳ್ಳ ಹೊಸದಳ, ದಾಸ, ವತ್ಸ ಮಿತ್ರ ಹಾಗೂ ಮಾಧುರ್ಯ ಎಂಬ ಇವು ಹೊಚ್ಚ ಹೊಸ ನಾಕು ದಳಗಳು. ಕದಿರ=ಮಿಂಚು. ಪ್ರಕಾಶಿಸು. ಕಾಂತಿ.



# ೧೫ ಅಶೋಕವೃಕ್ಷ

೧

ಅಶೋಕವೃಕ್ಷದ ನೆರಳಿನಲಿ
ಸಶೋಕ ಸೀತೆಯ ಕಂಡಿದ್ದೆ.
ಅಶೋಕಚಕ್ರದ ಧ್ವಜದಡಿಗೆ
ಸಶೋಕ ಜನತೆಯ ಕಾಣುತಿಹೆ.

೨

ವಿಶೋಕಗೊಳಿಸುವ ದಿವ್ಯಧ್ವನಿ
ಆಗಿನಂತೆ ಮೊಳಗುವದೀಗೂ.
ವಿಶೇಷವೆನಿಸುವ ಶ್ರದ್ಧೆಯಲಿ.
ಶುದ್ಧಿಯಿರಲಿ ನವಬುದ್ಧಿಯಲಿ

೩

ಬೇಕೆಂಬುವನಿಗೆ
ಬಂದೇಬರುವವು
ಬೇಡದೆರಡು ದುಃಖ
ಬೇಡೆಂಬುವನಿಗೆ
ನಿಂತೇ ಬಿಡುವವು
ಬರಬೇಕಾದ ಸುಖ.

೪

ಬಿಡಿಸುವ ಸ್ವಾಮಿಯೊ
ತಿಳಿದೇ ನೀಡುವ
ಅವನ ತೃಪ್ತಿ ಸಾಕು.
ಜೀವಕೆ ಯಾವುದು
ಬೇಕು ಬೇಡವೋ!
ಯಾರು ಹೇಳಬೇಕು?

---

ಭಾವ : ಜನತೆಯ ಭಾವ ಪ್ರಪಂಚವು, ಅಶೋಕ ವೃಕ್ಷದ ಬುಡಕ್ಕಿರುವ ಶೋಕಸ್ಥಿತಿಯ ಸೀತೆಯಂತಿದೆ. ಪರಿಹಾರವೇನು? ದುಃಖಕೂಡ ಅಧ್ಯಾತ್ಮ ಎಂಬುದಾಗಿ ಭಾಗವತ ಸಾರುತ್ತದೆ. ಇದನ್ನೇ ನಂಬದೆ ಗತಿಯಿಲ್ಲ ಎಂಬ ಭಾವ ಇಲ್ಲಿದೆ.

# ೧೬ ರಮ್ಯ-ಅಗಮ್ಯ

ರಮ್ಯವಿರುವ ಈ ಪ್ರಪಂಚ
ಎಂದಿಗೂ ಅಗಮ್ಯವು
ಗಮ್ಯವಿರಲಿ ಇರಲಗಮ್ಯ
ಯಾವಾಗಲು ರಮ್ಯವು ॥ ಪಲ್ಲವಿ ॥

೧

ಇರವ ಹರವ ಬಲ್ಲರಾರು
ಎಲ್ಲಿ ಇದರ ಅಂತವು ?
'ನಾನೆ ಆದಿ ಜಗಕೆ ಹಾದಿ'
ಎಂಬುದಿದರ ಪಂಥವು.
ಜಡವೆ ನಾಶರಹಿತವೆಂದು
ಎನುವನು ವಿಜ್ಞಾನಿಯು.
ಜೀವಕಿಹುದು ಅಮರಪಟ್ಟ
ಹೇಳಲೇಕೆ ಜ್ಞಾನಿಯು.

೨

ಇನಿಸು ಉಳಿದು ಇನಿಸು ಬೆಳೆದು
ಅಳಿವುದಿನಿಸು ರೂಪವು.
ಸೃಷ್ಟಿಲೀಲೆಗಿದು ಸ್ವಭಾವ
ರೂಪಗಳ ಸ್ವರೂಪವು.
ಹುಟ್ಟುಸಾವು ಎರಡು ಮೆಟ್ಟು
ಜೀವನಟನ ಆಟಕೆ.
ಜೀವನವಿದು ನಾಟ್ಯರಂಗ
ಭಾವರಸದ ಮಾಟಕೆ.

---

ಭಾವ : ರಮ್ಯತೆಯಲ್ಲಿ ಇರುವ ಅಗಮ್ಯತೆಯೇ ಅದರ ಧ್ವನಿ.

# ೧೭ ಬೆಳ್ಳಿ ಮೂಡಲಗಾಲ

(ಯಾ ನಿಶಾ ಸರ್ವಭೂತಾನಾಂ ತಸ್ಯಾಂ ಜಾಗರ್ತಿ ಸಂಯಮೀ)

೧

ಇರುಳಿನಂಚಿಗೆ ಹಿಂಚೆಮುಂಚೆಗೆ
ನಲಿವ ಬೆಳ್ಳಿಯ ಬೆಳ್ಳಿಯೇ,
ಹೊತ್ತಿನೆಡಬಲ ಸುತ್ತಿ ತುಳುಕುವ
ಬೆಳಕು ಬೆಡಗಿನ ಬಳ್ಳಿಯೇ,
ಕತ್ತಲಾಚೆಗೆ ಇರುವ ಮಾಟವ
ಎಲ್ಲಿ ಕಲಿತೆಯೆ 'ಮಳ್ಳಿ'ಯೆ ?

೨

ಮೂಗನೆಡಹುತ ಗಾಳಿ ತಡಹುತ
ಹೊರಟ ಕಂಪಿನ ಕುರುಡನೂ
ಗಾಳಿ ಸುಳಿಗಳ ಸೀಳಿ ಬರುವನು
ಸ್ವೇಚ್ಛೆಗೇಳುವ ಗರುಡನು.
ಚಿಕ್ಕ ಮಿಣುಕಲಿ ಬೆಳ್ಳಿ ತಿಣುಕಲಿ
ಒಂದೆ ಎಂಬೆಯ ಎರಡನೂ ?

೩

ಬಾಳಗವಿಯಲಿ ತಮವು ಕವಿಯಲಿ
ಕುಣಿವವಾತ್ಮದ ಅಣುಗಳು.
ಜೇನುಗೊಳಿಸುವವೀಗ ಹೂರಸ
ಜೀವದಾ ಜೇನ್ನೊಣಗಳು.
ಹಾಳುಗನಸಿನ ಮಸಣದಲಿ ಹೊರ-
ಳುವವು ಜೀವದ ಹೆಣಗಳು.

---

ಭಾವ : ಬೆಳ್ಳಿ ನಕ್ಷತ್ರ-ಶುಕ್ರೋದಯ ಕಾಲದಲ್ಲಿ ಬಂದ ಕಲ್ಪನಾವಿಲಾಸ.

ಶಬ್ದಾರ್ಥ : ತಿಣುಕು-ತಿಣಕು-ತಿಣಕು=ಬಿಕ್ಕು, ಕಷ್ಟಪಡು.

## ೧೮ ಉಷೆ ತಂದಾಳಿಕೊ

೧

ಉಷೆ ತಂದಾಳಿಕೋ, ರವಿ ಬಂದಾನಿಗೋ
ಆತ ಹಿಂದ, ಈಕಿ ಮುಂದ ಮುಽಂದ.

೨

ಕತ್ತಲಿ ಹಿಡಿದಽದ ತನ್ನ ದಾರಿಽಽ ಬೆನ್ನ ತೋರಿಽ
ನಸುಕು ಬಿತ್ತು ಎತ್ತೊ ಜಾರಿಽಽ ಆಗಿ ವಾರಿಽ.
ಹೋದ್ಹಾಂಗ ಮುಸುಕು ಹಾರಿಽಽ ಮುಗಿಲನೇರಿಽ

೩

ಬೆಳಗಿನ್ಯಾಗ ಬೆರತು ಆಗ್ಯಾರೊಽಂದ
ಗುಲಾಬಿ ತೋರ್‍ಯಾನ ಲಜ್ಜಿ

೪

ಹಕ್ಕಿ ನುಡಿಸ್ಯಾವ ಗೆಜ್ಜಿ
ಬೆಳಕು ಹಾಕ್ಯಾವ ಹೆಜ್ಜಿ

೫

ಅವರು ಬರೋಽದನಽ ಬಲು ಚೆಂಽದ
ಜಗಕ ಸೂರಿಸೂರಿ ಆನಂದ!

---

ಭಾವ : ಬೇಂದ್ರೆಯವರ ವಿದ್ಯಾರ್ಥಿ ಹಾಗೂ ತರುಣ ಮಿತ್ರರಾಗಿದ್ದ ಶ್ರೀ ಮಾಗಡಿ ಅವರ ವಿವಾಹ ಸಂಧರ್ಭ. ಶ್ರೀಮತಿ ಲೀಲಾವತಿ ಮಾಗಡಿ ಕುರಿತು.

## ೧೯ ಆ ತನು

೧

ಹಿಡಿಯ ಹೋಗೆ ಹಿಡಿಯ ಬರುವ
ಇಡಿಯ ಗಗನ ಮುಸುಕಿ ಇರುವ
ತಾಽ ತನ್ನ ತಾನಿನಲ್ಲಿ
ತಾನೆ ತನ್ನ ತರುವನು
ಅವನು
ನಾದ ಬಿಂದು ಕಲಾತೀತನು.

೨

ಮಾತನೊಲ್ಲ ಮೌನವಿಲ್ಲ
ಗೀತರಾಗ ಆತ ಬಲ್ಲ
ಆಽ ಶ್ರುತಿಯ ತತಿಯ ಗತಿಯ
ಹೀರಿ ಸೇರಿ ಇರುವನು
ಅವನು
ನಾದ ಬಿಂದು ಕಲಾತೀತನು.

---

ಭಾವ : ಕನ್ನಡ ಸರ್ವನಾಮಗಳ ಚಿಂತನದ ಫಲವಾಗಿ ಆಗೀಗ ಒಂದು ಅಚಿಂತ್ಯಾರ್ಥ ಹೊಳೆಯುವದು. ತಾನು ಎಂಬುದು ಪರಮಾತ್ಮ ಶಕ್ತಿಯ ಸಂಕೇತ.

ಶಬ್ದಾರ್ಥ : ತತಿ=ಮೊತ್ತ

# ೨೦ ಈ ಸಲದ ಸುಗ್ಗಿ

ಪ್ರತಿವರುಷದ ಹಾಗಲ್ಲವು ಈಸಲದೀ ಸುಗ್ಗಿ।
ಏನರಳಿದೆ ಗಿಡಮರ ಬಳ್ಳಿಗಳೆದೆ ಹಿಗ್ಗಿ ॥ ಪಲ್ಲವಿ ॥

೧

ಕೊಳಲ ಗುಬ್ಬಿ ಕರೆಯುತ್ತಿವೆ, ತೋಟಕೆ ಬಾ ಹೊರಗೆ।
ಬೇವಿನ ಹೂ ನೆರಳಿನಲ್ಲಿ ಸವಿನೋಟದೊಳದೊ ನೆರೆಗೆ॥

೨

ಹೊನ್ನ ಹೂವ ಗೊಂಚಲುಗಳ ಹೊತ್ತಿಹುದಾ ಕಕ್ಕೆ।
ಯಾ ರಾಯನ ಬರವ ಕಾದು ನಿಂತಿಹುದೇತಕ್ಕೆ ? ॥

೩

ಎಸಳೆಸಳಿನ ಸಿರಸಲ ಚವುರಿಸುವದು ಮೈಯನ್ನೆ।
ಬೀಸಲು ಮೈನವಿರೇರಿದ ನೇರಿಳೆ ನವಕನ್ನೆ॥

೪

ತೊಟ್ಟುಚುತ್ತ ತೊಟ್ಟಿಡುತಿದೆ ಮೊಗ್ಗನು ಹೂ ಹಾಸಿ।
ಹುಲಗಿಲು, ಗಾನನಿಮಗ್ನಧ್ಯಾನದ ಹೊಸ ದಾಸಿ॥

೫

ಮುಂಗಾರಿಯ ಗುಡಿಗಿಗೆ ಸಂಪಿಗೆ ಮುಂಗುಡಿ ಬಿಟ್ಟು।
ಪಾರಿಜಾತ ಮೊಗವೆತ್ತಿದೆ, ಹಸುರಂಗಿಯ ತೊಟ್ಟು॥
ಪ್ರತಿವರುಷದ ಹಾಗಲ್ಲವು..... ।

---

ಭಾವ : ಒಂದು ವಸಂತ ವರ್ಣನೆ.

ಶಬ್ದಾರ್ಥ : ಕಕ್ಕೆ=ಹಳದಿ ಹೂ ಬಿಡುವ ಮರ, ಸುವರ್ಣಕ. ನೇರಿಳೆ=ನೀರಲಮರ.

# ೨೧ ಹರಗೋಣ ಬಾ ಹೊಲ

ಹರಗೋಣ ಬಾ, ಹೊಲ ಹೊಸದಾಗಿ
ಬಿದ್ದsದ ಹ್ಯಾಗೋ ಕಾಲ್‌ಕಸವಾಗಿ ॥ ಪಲ್ಲವಿ ॥

೧
ಬಿತ್ತಿದರು ಕಾಳು ಹನಿಹನಿಯಾಗಿ
ಬರ್‍ತಾಳ ತಾಯ್ ತೆನಿತೆನಿಯಾಗಿ
ನಂಬಿಗಿಲೆ ತುಂಬ್ಯsದ ನಮ್ಮ ಬಾಳು
ನಂಬಿಗಿಲೆ ಬಿತ್ತೋಣ ನಮ್ಮ ಕಾಳು.

೨
ನಂಬಿಗೀಲೆ ದುಡಿತಾನ ಬಸವಣ್ಣಾ
ನಂಬಿಗ್ಯಾಗೈತಿ ಅವನ ಕಸುವಣ್ಣಾ
ಕಸುವೀಲೆ ಬೆಳೆಸೋಣ ಎತ್ತಗೋಳು !
ಎತ್ತಲ್ಲ; ಅವು ನಮ್ಮ ಮುತ್ತಗೋಳು !

೩
ನಂಬೆಣ್ಣಗ ಒಲದಾನೊ ಶಿವ ನೋಡೋ
ಇಂಬೀಲೆ ಬೇಡೋದು ಅವsಗ ಬೇಡೋ
ಕೊಟ್ಟsರ ಕೊಡತಾನ ಶಿವನೆಲ್ಲಾ
ಕೊಡಾವ್ರ ಹೊಟ್ಟಿಮಾತು, ಶಿವ ಬಲ್ಲಾ.

೪
ಹೊತ್ತಿಗ್ಯಾಗ ಬರಿ ಶಾಸ್ತ್ರದಾಧಾರ
ಕುತ್ತಿಗಿ ಮ್ಯಾಲೈತಿ ನೊಗಭಾರ
ನಂಬಿಗ್ಯಾಗ ಸೆಲೀತsದ ಬಲ ಎಲ್ಲಾ
ನಂಬಿಗೀನ ಸೋರಿದರ ಬಲ ಇಲ್ಲಾ

---

ಭಾವ : ನಮ್ಮ ಕೃಷಿಕರ ಹಾಡು. ಈ ಕೃಷಿಕರ್ಮ ಅಂತರಂಗದ ಕೃಷಿ ಕರ್ಮದ ಸಂಕೇತವೂ ಅಹುದು.

ಶಬ್ದಾರ್ಥ : ಇಂಬಿಲೆ=ಪ್ರೀತಿಯಿಂದ. ಹೊತ್ತಿಗೆ=ಭವಿಷ್ಯ ಹೇಳುವ ಪುಸ್ತಕ, ಸರಿಯಾದ ವೇಳೆಗೆ.

# ೨೨ ವೈತಂಡವಾದ

೧
ವೈತಂಡವಾದಗಳ ತಾಂಡವವು ನಡೆದಿಹುದು.
ತಂಡತಂಡಗಳೆಲ್ಲ ಇತ್ತಂಡವೇ
ಸರ್ವಜ್ಞ, ಸ್ಮಿತಹಾಸ್ಯಲಾಸ್ಯವಾಡುತ್ತಿಲ್ಲ
ಮೃತ್‌ಪಿಂಡವಾಗಿಹುದು ಬ್ರಹ್ಮಾಂಡವೇ.
೨
ಸಾತ್ವಿಕದ ಕನ್ನಡಿಗೆ ತಾಮಸವು ಮುಸುಕಿಹುದು
ಬಿಂಬಕ್ಕೆ ಪ್ರತಿಬಿಂಬ ಕಾಂಬುದಿಲ್ಲ
ನೋಟವಿಲ್ಲದಕಾಗಿ ಕಣ್ಣೆ ಕುರುಡೆನಿಸುವದು
ಇಹ ವಸ್ತು ತಾನು ಇಹೆನೆಂಬುದಿಲ್ಲ
೩
ಕಾಲು ಇಲ್ಲದ ಪುರುಷ. ಕೈಯು ಇಲ್ಲದೆ ಹೋದ
ಮೌನದಲಿ ಮುಳುಗಿತ್ತು ಮಾತುಗೀತು.
'ನಾಸ್ತಿ' ಎಂದರು ಕೂಡ ಅಸ್ತಿಯೆಂದಾದೀತು ?
ಇದ್ದದ್ದು ಇಲ್ಲದ್ದು ಬರಿಯೆ ತೂತು.

---

ಭಾವ : ಮಾನವೀಯ ಜೀವನದಲ್ಲಿ ತಲೆ ಎತ್ತಿದ ವಿವಿಧ ವಾದಗಳಲ್ಲಿ ಸಂವಾದ ಮೈದೋರಿದಾಗ ಸೃಷ್ಟಿ; ವಿವಾದ ತಲೆ ಎತ್ತಿದಾಗ ಪ್ರಳಯ.

ಶಬ್ದಾರ್ಥ : ವೈತಂಡವಾದ=ಬೆತ್ತದಂಡಿಗೆಯೊಂದಿಗೆ ವಿಚಾರ ಪ್ರಚಾರ ಮಾಡುವ ಗೀತ. ತಾಂಡವ=ರುದ್ರನ ನೃತ್ಯ. ಇತ್ತಂಡ=ಎರಡು ವಿಭಾಗ.





## ೨೩ ಹೃದಯ-ಪುಂಡರೀಕ

೧

ಹೃತ್‌ಪುಂಡರೀಕ ಪ್ರವಿಷ್ಟನೀ ವಿಟ್ಠಲನು।
ಪುಂಡರೀಕನ ಮುಂದೆ ನಿಂತ ವಿಟ್ಠಲನು॥

೨

ಯಜ್ಞವಿಷ್ಟರದಲ್ಲಿ ಅಧಿಯಜ್ಞನಾದವನು।
ಕ್ಷೇತ್ರಜ್ಞನಾಗಿ ಪ್ರತಿಕ್ಷೇತ್ರಕಿಳಿದವನು॥

೩

ಅಧಿದೈವತದಲ್ಲಿ ಪುರುಷನೆನಿಸಿದನು।
ನಮ್ಮ ಸ್ವರೂಪದಲಿ ತಾನೆ ತಾನಾಗಿ॥

೪

ಭೌತಿಕದ ರಂಗದಲಿ ನಾನೆ ನಾನಾಗಿ।
ಹೃದಯವಿಷ್ಟರದಲ್ಲಿ ಅಧಿಯಜ್ಞನಾಗಿ॥

---

ಭಾವ : ಶ್ರೀ ವಿಟ್ಠಲ ಪುಂಡರೀಕ ಸಂಕೇತಾರ್ಥಗಳ ವಿವರಣೆ.

ಶಬ್ದಾರ್ಥ : ಪ್ರವಿಷ್ಟ=ಪ್ರವೇಶ ಹೊಂದಿದ. ಯಜ್ಞವಿಷ್ಟರ=ಯಜ್ಞ ಮಾಡುವ ಪುರೋಹಿತನ ಆಸನ. ಅಧಿಯಜ್ಞ=ಯಜ್ಞದ ಅಭಿಮಾನಿ ದೇವರು. ಕ್ಷೇತ್ರಜ್ಞ=ಎದೆಯ ಒಕ್ಕಲಿಗ. ಅಧಿದೈವತ=ರಕ್ಷಣೆ ಮಾಡುವ ದೇವರು. ಹೃದಯವಿಷ್ಟರ=ಹೃದಯ ಎಂಬ ಆಸನ.

# ೨೪ ಟೊಂಕದ ಮೇಲೆ ಕೈ ಇಟಗೊಂಡು

೧
ಟೊಂಕದ ಮೇಲೆ ಕೈ ಇಟಗೊಂಡು
ಬಿಂಕದಾಕಿ ಯಾರ ಈಕಿ ?
ಒಂಕೀತೋಳ ತೋರಸತಾಳ
ಸುಂಕದ ಕಟ್ಟ್ಯವಗ.

೨
ಯಣ್ಣಾ, ಮಾವಾ ಅಂತ ರಮಿಸಿ
ಬಣ್ಣದ ಮಾತ ಆಡಿಕೋತ
ಕಣ್ಣಾಗ ಮಣ್ಣ ತೂರುವಾಕಿ
ಸಣ್ಣನ್ನ ನಡದಾಕಿ.

೩
ಕಮ್ಮಗ ನಾಲಿಗಿ ಚಾಚತಾಳ
ಸುಮ್ಮಸುಮ್ಮಗ ನಾಚತಾಳ
ದಮ್ಮಡಿ ಕೂಡ ಕೊಡದ ಹಾಂಗS
ಬಿಮ್ಮಗ ಹೊಂಟಾಕಿ.

೪
ಮೆಂತೆದ ಸಿವುಡು ಕಟ್ಟಿಕೊಂಡು
ಸಂತಿ ಪ್ಯಾಟಿ ಮಾಡಲಿಕ್ಕೆ
ಅಂತೂ ಇಂತು ಎಲ್ಲರಕಿಂತ
ಮುಂಚಿಗಿ  ಬಂದಾಕಿ.

---

ಭಾವ : ಟೊಂಕದ ಮೇಲೆ ಕೈ ಇಟ್ಟುಕೊಂಡ ಈ ಮೂರ್ತಿ ವ್ಯವಹಾರ ಪ್ರಪಂಚಕ್ಕೆ ಸೇರಿದ ಎಲ್ಲರ ಪರಿಚಯದ ಆಕರ್ಷಣೆಯದು.

ಶಬ್ದಾರ್ಥ : ಬಿಂಕ=ಗರ್ವ, ಠೀವಿ. ಸುಂಕದಕಟ್ಟ=ತೆರಿಗೆ ವಸೂಲ ಮಾಡುವ ಸ್ಥಳ. ಸಣ್ಣನ್ನ=ನಿದಾನ, ಸಾವಕಾಶ. ಕಮ್ಮಗ=ಸುಖವಾಗಿ, ಮಧುರವಾಗಿ. ದಮ್ಮಡಿ=ಒಂದು ಬಿಡಿಕಾಸು. ಬಿಮ್ಮನೆ=ಗಂಭೀರವಾಗಿ, ಸೊಕ್ಕಿನಿಂದ ಕೂಡಿ.

ವಿಶೇಷ : ಬೇಂದ್ರೆಯವರ ''ಹೊಸ ಸಂಸಾರ'' ನಾಟಕದಲ್ಲಿ ಈ ಕವನ ಬಳಸಲಾಗಿದೆ.

# ೨೫ ಮೌನವಾರ

೧
ಮಾತುಗಳಾಚೆಯ ವಿದೇಹಭಾವ
ಸದೇಹವಾಗಲು ತಪಿಸುತಿದೆ
ಅಶೋಕವನದಲಿ ವಿಶೋಕನಾಗಿ
ರಾಮನಾಮವನೆ ಜಪಿಸುತಿದೆ.
೨
ಕಣ್ಣೀರ್ ಕಡಲಿಗೆ ಸೇತುವೆ ಕಟ್ಟಿ
ದಶಮುಖ ರಾವಣನನು ತುಳಿದಟ್ಟಿ
ಸೀತಾ-ರಾಮರು ಕೂಡುವರೋ ?
ಒಬ್ಬರೊಬ್ಬರನು ನೋಡುವರೋ ?
ಅದು ಏನೇ ಇರಲಿ,
೩
ಮಾತಿನ ಮಲ್ಲರು ಯಾರೋ ? ಆರು.
ಮೂಗರು ಏಕೋ ಬಲ್ಲವರಾರು ?
೪
ಮೌನವ್ರತಕೆ ದೀಕ್ಷಿತರಾಗಿ
ಮೌನರಂಗದಲಿ ಇಳಿದಿಹರು
ಮಾತಿನ ಪಲ್ಲವಿ ಉದಿರಿಸಿ ಮೌನದಿ
ಬಿಳಿ ಸಂಪಿಗೆಯೊಲು ಮುಗಳಿಹರು.
೫
ಕಾಕತನವೆ ಹೊರ ಪೋ ಗೋ ಎಂದು
ಜನಮನ ತಾನ-ವಿನಾಯಕರು
ನಾನಿನ ಎದೆಯಲಿ ತಾನಿನ ಬೀಜವು
ಬಿತ್ತಲಿ ಎನುವ ವಿಧಾಯಕರು
೬
ನೊಂದವರು, ಅರೆಬೆಂದವರೂ
ಆತ್ಮದತ್ತ ಹೊರಳರಲಿ ನೋಡಿ ಎಲ!
ಸತ್ ಇದೆ, ಸತ್ತಿಲ್ಲೆಂದವರು
ಸತ್ತ್ವದ ಸೊತ್ತಿಗೆ ಬಂದವರು.

೭
ಊಟ ಉಡಿಗೆಯಲಿ ವಿನೀತರು
ಓದುವಾದದಲಿ ಸುನೀತರು
ನಿದ್ರಿಸಲೆಲ್ಲರಿಗೊಂದೇ ಮಳಗಿ
ತಮ್ಮ ತಮ್ಮ ಮನ ತಾವೇ ಬೆಳಗಿ
೮
ಬೆಳಗಾವಿಯ ಒಳಕುಲುಮೆಯಲಿ
ಅರೆ ಒಲುಮೆಯಲೀ ಅರೆ ಬಲುಮೆಯಲೀ।
ಹಗಲಿರುಳೆನ್ನದೆ ಚಿಂತಿಸುತಿಹರು ;
'ಕನ್ನಡ ನಾಡೇ' ಎಂದು
'ಎಲ್ಲಿದೆ ತಂತಮ್ಮೆಡೆ ?' ಎಂದು
ಮೌನದ ಗೂಡಿನ ಹಕ್ಕಿಗಳು !
ಮಾತಿನ ಬಯಲಿನ ಚುಕ್ಕಿಗಳು !
೯
ಇವರೆಲ್ಲರು ನರಸಿಂಹರು ಆಗಿ
ಗರ್ಜಿಸುವರು ಎಂದು ?
ಎಂದೋ ಎಂದು ಮೌನವು ಕಾದಿ
ನುಡಿ-ನಡೆ ಮೈಗೊಂಡು.
೧೦
ಧಾರವಾಡದಾ ಸೀಮೆಯ ಸುತ್ತೂ
ತಗ್ಗಿ ಮೇಲಕುಕ್ಕಿ
ಮಾಳಮೊರಡಿಯಲಿ ನಿಂತು ನೋಡುತಿದೆ
ಹಾಗೆಯೆ ಎಕ್ಕೆಕ್ಕಿ.
೧೧
ಮಿತ್ರರ ಕರುಣೆಯು ಕಾಯುತ್ತಿಹುದು
ಮನದನ್ನೆಯರೊಲವು
ಗುಲ್‌ಮೊಹೋರಿನಲಿ ಆರತಿ ಎತ್ತಿ
ಎದೆ ನಾಡಿನ ಚೆಲುವು
೧೨
ಬಂಧು-ಬಳಗವೂ ಬಂದು ಬಂದು ಒಂ-
ದಾಗಿ ಕೂಡುತಿಹುದು
ಒಳಗೆ ಹೊರಗೆ ಹಿರಿ ದೈವಕೃಪೆಯು ತಾ-
ಯಾಗಿ ನೋಡುತಿಹುದು

೧೩
ವಾಸುದೇವನೇ ಎಲ್ಲವು ಎಂದು  ಹಿರಿಹಿರಿ ಹಿಗ್ಗುವರು
ಇಂಥವರಾರು ಹೇಳಿರಿ ಯಾರು ತಮತಮಗೊಗ್ಗುವರು ?

---

ಭಾವ : ''ಧಾರವಾಡ''ದ ಸಂವಾದ ಚತುರ ಮಿತ್ರರ ಸಹವಾಸದಲ್ಲಿ ಮಾಳಮಡ್ಡಿಯಲ್ಲಿ ಮೌನದಲ್ಲಿ ಕಳೆದಾಗ ಬರೆದುದು.  ಮೌನದಲ್ಲಿ ಭಾಗವಹಿಸಿದ ಎನ್. ಕೆ. ದೀಕ್ಷಿತ, ರಂ. ಶ್ರೀ. ಮುಗಳಿ, ವಿ. ಕೃ ಗೋಕಾಕ, ವಿನೀತ ರಾಮಚಂದ್ರರಾವ ಹಾಗೂ ಎಸ್.ಆರ್.ಮಳಗಿ ಇವರ ಹೆಸರುಗಳು ಕವನದ ಅಲಂಕಾರಗಳಾಗಿ ಸೇರ್ಪಡೆಗೊಂಡಿವೆ.

ಶಬ್ದಾರ್ಥ : ಎಕ್ಕೆಕ್ಕಿ=ಒಂದರ ಮೇಲೊಂದಾಗಿ, ಮೇಲೆ ಮೇಲೆ.

ವಿಶೇಷ : ಮೌನ ಒಂದು ವಿಶೇಷ ಶಕ್ತಿ. 'ವಾಸುದೇವಃ ಸರ್ವಂ' ಎಂಬ ಚಿಂತನೆಯಲ್ಲಿದ್ದ ಗೆಳೆಯರ ಗುಂಪು ನರಸಿಂಹ ಅವತಾರ ತಾಳಿ, ಅಧರ್ಮವನ್ನು ಎದುರಿಸಲೇ ಬೇಕು ಎಂಬ ಆಶಯ ಇಲ್ಲಿದೆ.

ನುಡಿ-೮ : ಬೆಳಗಾವಿ, ಕನ್ನಡ ನಾಡಿಗೆ ಸೇರ್ಪಡೆಯಾಗಬೇಕು.  ಅದರ ಜವಾಬುದಾರಿ ಕರ್ನಾಟಕದ್ದು ಎಂಬ ಒಳಮಿಡಿತ ವ್ಯಕ್ತವಾಗಿದೆ.



## ೨೬ ಬಿಡಿಮುತ್ತು

೧

ಹುಟ್ಟಿದುದು ಚಿಪ್ಪು
ಮುತ್ತಿದುದು ಕಡಲಗಲುಪ್ಪು
ಮುಳುಗಿದುದೊ ನೀರಾಳ ಕಪ್ಪು ಕಪ್ಪು
ಚಿಪ್ಪಲ್ಲ,
ಬೆಳಕನೊಳಗೊಂಡ ಮಿಂಚಿನ ಬೆಳ್ಪು
ಸ್ವಾತಿಸ್ನೇಹದ ಮೀನಗಣ್ಣೆನೊಳ್ಪು.

೨

ಕರುವಿರದ ಎರಕವಿದು
ನೀರ್ಮುತ್ತು ಎನಬೇಡ
ನೀರ ನೀರೆಯರೆರೆದ ಮುತ್ತು ನೀರೆ?
ಎದೆಯ ಹದ
ಹೃದಯ ಮುದ
ತುಟಿಗೆ ಮುತ್ತಾಗುವವು
ಕಣ್ಣುಚುಕ್ಕೆಯ ಕದಿರ ಮೇರೆ ಮೀರೆ.

೩

ಇದಿರೇನೊ ಕಂಡು
ಒಳಗಂಡು ಹೃದಯದ ಗವಿಯ
ರವಿಯಂತೆ ಬೆಳಕಿನಲಿ ಮುಳುಗಿಸಿತ್ತು
ಬಿಡಿ ಮುತ್ತು ಬಿಡಿಮುತ್ತು
ಎಕ್ಕಸರ ಪರಿದಿತ್ತು.
ಒಳಹೊರಗು ಕಾಂಬೊಲದಿ,
ಮುತ್ತ ಬಿತ್ತು.

೪

ಬಿಡಿ ಮಾತು
ಪವಣಿಸಿರೆ ಮೆರೆಯುವವು
ಒಲವುಗಂಪಿನ ನಾರುಸೂತ್ರದಲ್ಲಿ.
ಸ್ವರ್ಗೀಯ ಸಾರಸೌಂದರ್ಯವನು ಸವಿಯುವಾ
ಪಂಕಜದ ಪಾಂಗಿನಾ ನೇತ್ರದಲ್ಲಿ.

೫
ಮುದ್ರಿಸಿತು ಅಧರದಲಿ;
ನಿದ್ರಿಸಿತು ಉದರದಲಿ,
ಮೂಡಿತ್ತು ತೊಡೆಯಲ್ಲಿ, ಮೂರ್ತಿಗೊಂಡು.
ತೋಳತೊಟ್ಟಲೊಳಾಡಿ
ಮಾತೃಗೀತವ ಹಾಡಿ
ಕೀರ್ತಿಪಡೆದಿತು ಜೀವ ಸ್ಫೂರ್ತಿಗೊಂಡು
೬
ಮಣ್ಣೆಂದು ಜರೆಯುವದು!-
ಏನು ಮಣ್ಣೋ ಕಾಣೆ?
ಮಣ್ಣ ಬೆಳೆ, ಮಣ್ಣ ಕಳೆ, ಮಣ್ಣಗಂಪು.
ಒಡೆಯ ಬಿಟ್ಟರು,-
ಒಡಲು ಬಿಡದು ಮಣ್ಣಿನ ನೆರೆಯ
ಬೂದಿಯಾದರು ಬದುಕು
ಮಣ್ಣೆ ತಂಪು.
೭
ಬಾನಗಂಗೆಯ ಮರುಕ
ಮೃತ್‌ಪಿಂಡ ತೊಳೆಯುತಿದೆ
ಮಾಟ ಮಮತೆಗೆ ತೊರೆವ
ಬಾಳಚಿಲುಮೆ.
ಶ್ರೀನಿವಾಸನು ಕೂಡ
ತಿರುಮಲೆಗೆ ನೆಲೆನಿಂತ
ಮಣ್ಣಲ್ಲ ಈ ಭೂಮಿ; ದೇವನೊಲುಮೆ.
೮
ತಪ್ತ ಸೂರ್ಯನ ತಾಪ,
ತಪತಪನೆ ತೊಯ್ಯುವದು,
ಶಪಿಸಿದಳೆ, ತಪಿಸಿದಳೆ ಭೂಮಿತಾಯಿ:
"ಬಸವಳಿಯದಿರು ಮಗುವೆ!
ಹಸನಾಗು, ರಸವಾಗು
ಕಸುವಿರುವವರೆಗು ತಡೆ, ತಾಳು, ಕಾಯಿ."

೯

ರಮ್ಯವೋ !
ಏನಿದೊ ಅಗಮ್ಯವೋ ? ಗಮ್ಯವೋ !
ಕಾಣ್ಕೆ ಎನೆ ನೀ ಕಾಣೆ-
ವೇದವಚನ.
ನಾ ಕಾಣೆ ಹದಿನಾರು ಕಲೆಯಲ್ಲಿ,
ತಲೆಯಲ್ಲಿ;
ಮುಕ್ಕಾಲು ಮರೆಗೆ ಇದೆ-
ವಿಶ್ವರಚನೆ.

೧೦

ಒಳಗಿಹುದೊ,
ಹೊರಗಿಹುದೊ
ಅಜ್ಞಾನ ಆ ಜ್ಞಾನ.
ಪ್ರಾಜ್ಞಗಿದೆ ಈ ವಿಶ್ವ ಒಂದು ಮೂರು.
ತಿಳಿವ ತೇಜದ ಮುಂದೆ
ನಾನು, ಬಾನೂ, ನೀನು
ತುದಿಯಿಂದ ತುದಿವರೆಗೆ
ಆರುಪಾರು.

೧೧

ಕೋಕಿಲಕೆ ಕುಕಿಲು
ನವಿಲಿಗೆ ಕೇಕೆ, ಭೃಂಗಕ್ಕೆ
ಗುಂಗು ಗುಂಗುಂಗಾನ-ಏಕತಾನ
ಜಯದೇವನಷ್ಟಪದಿ, ಸರ್ವಜ್ಞನಿಗೆ ತ್ರಿಪದಿ
ಸ್ಫೂರ್ತಕ್ಕೆ ಚೌಪದವೆ ಜೀವಕೂನ.

೧೨

ಆ ಕೃತಿಗು, ಈ ಕೃತಿಗು,
ತ್ರಾಸು ತಕ್ಕಡಿ ಹಿಡಿದು
ಪ್ರಾಸವಚನಗಳಿಂದ ತೂಗಬೇಡ.
ಕೃತ್ತಿಕೆಗು ಮೃತ್ತಿಕೆಗು
ಯಾರ ಹೋಲಿಕೆ ಬೇಕು ?
ಜೇಡ ಹುಳ ತಿಳಿಯದೇ
ಬಲೆಯ ಜಾಡ ?

---

ಭಾವ : "ಉಗಾರ" ಹಳ್ಳಿಯಲ್ಲಿ ಸಂವಾದ ಚತುರ ಮಿತ್ರರ ಸಹವಾಸದಲ್ಲಿ, ಆದರೂ ಮೌನದಲ್ಲಿ ದಿನ ಕಳೆದಾಗ ಬರೆದುದು. ಎರಡೇ ಎರಡು ಮೌನವಾರ ಸಂಯೋಜನೆ ಗೆಳೆಯರ ಗುಂಪು ಮಾಡಿದ್ದು.

ಶಬ್ದಾರ್ಥ : ನೀರಾಳ=ನೀರಿನ ಆಳ. ಎಕ್ಕಸರ=ಒಂದು ಕಂಠಆಭರಣ. ಪಾಂಗು=ಸಾದೃಶ್ಯ. ಬಸವಳಿ=ದಣಿ, ಆಯಾಸ ಪಡು. ಕೂನ=ಕುರುಹು, ಗುರುತು. ತ್ರಾಸು=ತಕ್ಕಡಿ. ಕೃತ್ತಿಕೆ=ಕೃತ್ತಿಕೆ ನಕ್ಷತ್ರದ ಮಳೆ. ಮೃತ್ತಿಕೆ=ಪವಿತ್ರವಾದ ಮಣ್ಣು.

ವಿಶೇಷ : ಈ ಎರಡೂ ಮೌನವಾರಗಳ ಚಿಂತನಗಳನ್ನು ವರಕವಿ ಡಾ. ದ. ರಾ. ಬೇಂದ್ರೆ ಸಂಶೋಧನಾ ಸಂಸ್ಥೆ ಗ್ರಂಥರೂಪದಲ್ಲಿ ಪ್ರಕಟಿಸಲಿದೆ.



## ೨೭ ಮೋಡದ ಮಳಿಗೆಗೆ ರವಿ ಕಾದಿದ್ದ

೧
ಮೋಡದ ಮಳಿಗೆಗೆ ರವಿ ಕಾದಿದ್ದ
ನರಿ ಮದುವೆಯ ಕರೆಗೆ.
ಅದೇ ಹೊತ್ತಿನಲಿ ಕವಿಯೂ ಎದ್ದ
ಸುತ್ತಾಡಲು ಹೊರಗೆ.

೨
ಕೊಡೆಗಿಡೆ ಇಲ್ಲ; ಮಳೆ ಬಿಲ್ಲೆಸೆದು
ತಂಪಾದನು ರವಿಯು.
ಮೌನದ ಮದದಲಿ ತಪಿಸುತ್ತಿದ್ದನು
ಒಳಗೊಳಗೇ ಕವಿಯು.

೩
ಒಮ್ಮೆಯಾದರೂ ಕವಿ ಕಾಣದುದನು
ರವಿ ಕಂಡೇನೆಂದು
ನಿಜವಾಗಿಯು ಕಾದಿದ್ದನು ಯುಗಯುಗ
ಆ ದಿನ ಬಂತಿಂದು

೪
ತಪಸ್ವಿ ಕವಿಯನು ತಪತಪ ತೊಯ್ಸಿ
ತಾ ಕೆಡಬೇಕೆಂದು
ಮೋಡವ ಹಿಂಜಿ ಜನರಿಗೆ ಅಂಜಿ
ರವಿ ಅಡಿಗಿದನಂದು.

೫
ಒತ್ತಕರಡಿನೊಲು ಬಾನದ್ದಿತ್ತು
ಮಶಿಗೊಣ್ಣೆಯವೊಲು ವನವೆದ್ದಿತ್ತು
ಕತ್ತಲೆ ಕಿರಿಕಿರಿ ಸಾಗಿತ್ತು
ಮೌನ ಇದ್ದೆ ಇತ್ತು.

೬
ವೇಳಾಪತ್ರಿಕೆ ಮುಗಿಸಿದೆ ಕಾರ್ಯ
ಮಿಂಚಿದರೇನಂತೆ ?
ಅಣ್ಣಾರಾಯರ ಜವಾಬ್ದಾರಿಯಿರೆ
ಕವಿಗೇತರ ಚಿಂತೆ ?
೭
ಹೊತ್ತಾಗುತ್ತಲೆ ಹನಿ ಸೋಕದೆ ಕವಿ
ಮನೆಗೆ ಮರಳಿ ಬಂದ.
ಮುಳುಗಿದ ರವಿಯೂ ಕವಿ ಕಾಣದ್ದನು
ತಾನು ಕಂಡೆನೆಂದ.

---

ಭಾವ : ಮೌನವಾರದ ಒಂದು ವಿನೋದ. ''ಉಗಾರ'' ದ ಮೌನ ವಾರದ ವ್ಯವಸ್ಥೆ ಮಿರ್ಜಿ ಅಣ್ಣಾರಾಯರದಾಗಿತ್ತು

ಶಬ್ದಾರ್ಥ : ಮಳಿಗೆ=ಅಂಗಡಿ. ಒತ್ತಕರಡು=ಮಸಿ ಆರಿಸುವ ದಿಪ್ಪ ಕಾಗದ.

## ೨೮ ಹಾ ! ಸರು

ಹಾ ! ಮಗಳೆ, ಸರು, ಸರೋಜಿನಿ ।
ಯಾಮಗಳುರುಳಿದರು ನಿಲ್ಲವೀ ಕಂಬನಿಗಳ್ ॥
ತಾಮರೆಗಣ್ ಮುಚ್ಚಿದೆಯಾ ? ।
ಯಾ ಮುಖ ತೋರಿಸಲಿ ನಿನ್ನ ತಂದೆಗೆ ತಾಯ್ಗೆ ॥ ಪಲ್ಲವಿ ॥

೧

ನಿನ್ನ ನಗೆ-ನೆನಪು ಬೇಸರು ।
ನಿನ್ನಾ ಕುಡಿನೋಟ ಮಿಂಚು ಬೇಸರು, ಸರು ಹಾ ॥
ನಿನ್ನೆಯೊ ಮೊನ್ನೆಯೊ ಇದ್ದೆಯೊ ।
ಎನ್ನುವ ತೆರನಾಯ್ತೆ ಕನ್ನೆ ನಿನ್ನಾ ಬಾಳು !

೨

ಹೇಸರು ಯಮದೂತರು ಹಸು- ।
ಗೂಸುಂಗೊಲೆಗೆಂದು ಇಂದುವರೆ ತಿಳಿದಿರ್ದೆಂ ॥
ಹಾ, ಸರು ಶಿವದೂತರೆ ನಿ- ।
ನ್ನೇಸರನನ್ನೊಯ್ದರೆನಲು ಶಿವಲೋಕಕ್ಕೆ .

೩

ರೂಪುಗಳ ಕೊಲುವ ಕಾಲನು ।
ಪಾಪಿಯು, ಕೊಲಲಾರನದರ ಸವಿನೆನಪುಗಳಂ ॥
ಈ ಪರಿ ತಿಳಿಯದೆಯೂ ಸಂ- ॥
ತಾಪದೊಳೂ ನನಗೆ ಈಗ ಸಂತಸವಾಯ್ತು.

೪

ಅಗೊ ಆ ನಗೆಗೊಳದೊಳು ಒಳು ।
ಬಗೆಯೊಳು ತಾವರೆಯ ಸಿರಿಯ ಮೊಗದೊಳು ಭ್ರಮರಂ ॥
ಬಗೆಬಗೆಯೊಳು ಹೊರಳುತ್ತಿರೆ ।
ಇಗೊ ಆಗಿದೆ ನಿನ್ನ ನೆನವೆ ಕರುವಿಟ್ಟಂತೆ.

---

ಭಾವ : ಮಿತ್ರರ ಮಗಳ ಮರಣವನ್ನು ನೆನಿಸಿ ಬರೆದದ್ದು.

ಶಬ್ದಾರ್ಥ : ತಾಮರೆ-ತಾವರೆ=ಕಮಲ. ಯಾಮಗಳು=ಕಾಲಾವಧಿ.

# ೨೯ ಇದು ವಾರಪತ್ರಿಕೆ

೧

ಇದು ವಾರಪತ್ರಿಕೆಯು! ಏನು ಇಲ್ಲಿಯ ಸುದ್ದಿ?
ಯಾರೊ ಸತ್ತರು! ಯಾರೊ ಎಲ್ಲೊ ಗೆದ್ದರು! ಯಾರೊ?
ಯಾಕೆ ಬಿದ್ದರೊ ಏನೊ? ಸಾಕು ಗಾಳಿಯ ಗುದ್ದಿ
ಬರವಣಿಗೆ ಚಾಚಿ, ಉಸ್ಸೆಂದು ಮುಂದಲೆ ಬಾಚಿ
ಉಃಫೆಂದು ಹೊಗೆ ಸೂಸಿ ಇನ್ನು ಬರ್ಸೋ ಕಾರೊ
ಏನಾದರೂ ಸರಿಯೆ, ಓಡಿತಲ್ಲಿಯೆ ಬುದ್ಧಿ.

೨

ಚಿತ್ರಮಂದಿರದೆಡೆಗೆ, ಮುಂದೆ ಅನ್ನವೊ ಸಾರೊ
ಏನು ಕಾದಿದೆ ಏನೊ! ಹೊರಟತ್ತ ಉಲಕೋಚಿ
ಆಯುಷ್ಯಯಂತ್ರ ತಿರುತಿರುಗಿ ಹಾಗೇ ತಿರುಗಿ
ನೀರಸವು, ಅರಿತಗೊ ಕುಳಿತಲ್ಲಿಯೇ ಕೊರಗಿ-
ಬಾಸುಂಡೆ ಬರುವಂತೆ ಸೆಳೆದ ತಿರುಗಾ ಮುರುಗಿ
ದಾನ ತಂದಳು ಎಂದು ಕೂಗಿದರು, ಆ ದುರುಗಿ

೩

ಕೊನೆಗೊಮ್ಮೆ ಅವನ ಸುದ್ದಿಯೆ ಬಂತು ಪತ್ರದಲಿ
ಉಳಿದವರ ಹಾಗೆ ಬಲಿಯಾದನಿವ ಸತ್ರದಲಿ.

---

ಭಾವ : ಕೆಲವು ರಸೋಕ್ತಿ ಸುಭಾಷಿತಗಳು.

ಶಬ್ದಾರ್ಥ : ಉಲಕೋಚಿ=ತುಂಟ. ಬಾಸುಂಡೆ=ಹೊಡೆತದಿಂದ ಬರುವ ಬಾವು. ಸತ್ರ=ಅನ್ನಛತ್ರ.

# ೩೦ ಆಟ

೧
ತಿನುವೆ ಎಂದು ಅನ್ನ ಬಂತು
ನಾನೆ ಅದನು ತಿಂದೆ
ಸತ್ತೆ ಎಂದು ಪ್ರಾಣ ಚೀರೆ
ಮತ್ತೆ ಹುಟ್ಟಿ ಬಂದೆ.
೨
ನಾನು ನೀನು ಅವನು ಅವಳು
ಅದುವು ಇದುವು ಎಂದು
ತಿಳಿಯದಾಡುತಿತ್ತು ತಿಳಿವು
ಮುಚ್ಚಿ ಒಂದನೊಂದು.
೩
ತಾನೆ ಎಲ್ಲವಾಯಿತೇನೊ
ಎಲ್ಲರಲ್ಲು ತಾನೊ
ತಾನಿನೊಂದು ತಾನಿನಂತೆ
ಅವನು ನೀನು ನಾನೊ.
೪
ಜಗದ ಆಟ ಜೀವಗಳಲಿ
ಇಹನು ಈಶನಾಡಿ
ಚೆಲುವಿನಿಂದ ಒಲವಿನಲ್ಲಿ
ನಲಿದು ಬಹನು ಮೂಡಿ.

---

ಭಾವ : ವಿನೋದೋಕ್ತಿ; ವಿಡಂಬನೆಯೂ ಅಹುದು.

ಶಬ್ದಾರ್ಥ : ತಾನಿನ ತಾನ=ಸ್ವರ ವಿಸ್ತಾರ.

# ೩೧ ನಿರ್ಮಕ್ಷಿಕ

೧

ನೊಣವ ಜಾಡಿಸಬೇಡ ಇದ್ದಲ್ಲಿ ಇರಲಿ ಅವು
ಎದ್ದಾವು, ಸಿಕ್ಕಲ್ಲಿ ಹೋದಾವು, ಒಯ್ದಾವು
ಕಾಲಕಲ್ಮಷವನ್ನು, ಮಲ ತೊರೆದು ಮುಸುಕುವವು-
ಅಕೊ ಹೂವು! ಈ ದೃಶ್ಯ ನೋಡಬೇಕೇ ನಾವು?

೨

ಅವಕೇನು, ವ್ರಣ ಕೀವು ಬೆಲ್ಲ ಎಲ್ಲಾ ಒಂದು
ಉಂಡುಗಿಂಡಾವು ಅವು ತಾವೆ ತೊರೆದುದ ಬಂದು
ಆ ಜಾತಿಗದುವೆ ಗುಣ; ನೊಣವ ಜಾಡಿಸಬೇಡೊ
ಇದ್ದಲ್ಲೆ ಕಾಲಂಟಿಕೊಂಡು ಇರುವೊಲು ಮಾಡು.

೩

ನೊಣವಿಲ್ಲದೆಡೆಗೆ ಹೋಗೋಣ ನಾವೂ ನೀವು
ಅಚ್ಚ ಸೌಗಂಧವೇ ಅದರ ಜೀವಕೆ ಸಾವು
ಏಕೆ, ಬರೆಯಾ ನೀನು? ಏನು, ಕೀಳದೆ ಕಾಲು?

೪

ಅವು ಇದ್ದ ಎಡೆಗಿದ್ದು ಅದರ ಶಾಸನ ಮಾಡು
ಅದು ಕೂಡ ಕೆಲಸವೇ. ಒಪ್ಪೆಯಾ? ಇರಲಿ ಬಿಡು
ತಲೆ ಜಾಡಿಪುದಕಿಂತ ನೊಣ ಜಾಡಿಪುದು ಮೇಲು.

---

ಭಾವ : ''ಈಶ'' ಮತ್ತು ''ರಮ್ಯಾಗಮ್ಯ'' ಕವಿತೆಗಳ ಜಾತಿಗೆ ಸೇರಿದುದು.

ಶಬ್ದಾರ್ಥ : ನಿರ್ಮಕ್ಷಿಕ=ನೊಣಗಳು ಕೂಡ ಇಲ್ಲದ. ಕಲ್ಮಷ-ಕಶ್ಮಲ=ಹೊಲಸು, ಕೊಳಕಾದ. ವ್ರಣ=ಗಾಯ, ಹುಣ್ಣು. ಸೌಗಂಧ=ಸುಗಂಧ, ಸುವಾಸನೆ. ಬಾರೆಯಾ=ಬರುವದಿಲ್ಲವೆ. ಜಾಡಿಪುದು=ಕೊಡಹುವುದು, ಸ್ವಚ್ಛಗೊಳಿಸುವುದು.

# ೩೨ ಈಚಲ ಮರದಮ್ಮ



೧
ಈಚಲ ಮರದಮ್ಮ
ಕರುಣಿಸು ನಮ್ಮ
ಕೆದರಿವೆ ಗರಿ ತಲೆ ತುಂಬಾ
ಜೊಲ್ಲಿಲೆ ತುಂಬಿದೆ ಕುಂಭಾ
ಮೊಸಳೆ ಮೆಯ್ಯ ಜಗದಂಬಾ-ಓ.......

೨
ಹೆಣವಾದೆವು ಹೆಂಡದಲ್ಲಿ
ಉರುವಲು ಬಾಳ್ಕೊಂಡದಲ್ಲಿ
ದನಬದುಕಿದು ತಂಡದಲ್ಲಿ-ಓ........

೩
ಎಚ್ಚರದಲಿ ದುಡಿತದಾಳು
ಘನನಿದ್ರೆಯೆ ನಮ್ಮ ಬಾಳು
ನಡುನಡುವೆಯೆ ಕನಸು ಹಾಳು-ಓ.........

೪
ಹೊರಗೆ ನಿಶೆ, ಒಳಗೆ ನಿಶೆ
ಕತ್ತಲೊ ಕಡಲೆಲ್ಲ ದಿಶೆ
ತೀರೀತೇ ಇಂಥ ದಶೆ-ಓ.......

೫
ಬಯ್ದಾಡುತ ಸುಮ್ಮ ಸುಮ್ಮ
ಬಿದ್ದಿಹನಗೊ ಅಣ್ಣ ತಮ್ಮ
ಕುಡಿದು ದುಂದು ಕಂದಮ್ಮ-ಓ.......

೬
ನೋಡಲಾರೆವೀ ಚಿತ್ರಾ
ಮಲಕು ಬಿಡಲಿ ನಿನ್ನ ಸೂತ್ರಾ
ಕುಣಿಸು ಇನ್ನು ಬೇರೆ ಪಾತ್ರಾ-ಓ......

೭
ಇಳಿ ಎದೆಯಲಿ ಹಾಲಾಗಿ
ಎಚ್ಚರಿರುವೆವು ಹಾಯಾಗಿ
ಬೆಲ್ಲವ ಕೊಡು ತಾಯಾಗಿ-ಓ.........
ಬದುಕಿಸು ನಮ್ಮ
ಈಚಲ ಮರದಮ್ಮ

---

ಭಾವ : ಹೆಂಡದ ದೇವತೆಯನ್ನು ಕುರಿತು.

ಶಬ್ದಾರ್ಥ : ಕುಂಭ=ಕೊಡ. ನಿಶೆ=ರಾತ್ರಿ, ಸೆರೆಯ ಮದೋನ್ಮತ್ತತೆ. ದುಂದು=ಅಪವ್ಯಯ, ವ್ಯರ್ಥ ಖರ್ಚು. ಮಲಕು=ತಿರುವು ಮುರುವು, ಕಗ್ಗಂಟು. ಉರುವಲು-ಉರವಲು=ಸುಡುವ ಕಟ್ಟಿಗೆ, ಸೌದೆ. ಮಲಕು=ತೊಡಕಾದ ಗಂಟು.



# ೩೩ ಜೀವಾಳದ ಆಶೆ

ಯಾ ಆಸೆ ಜೀವಾಳದಿ ಉಳಿದು
ಕರ್ಮವನು ಕಳೆದು
ರೂಪವನು ತಳೆದು
ಇದ್ದಿತಲ್ಲೀ-
ಇಗೊ ಮೂಡಿ ಬಂದಿತಿಲ್ಲಿ. ॥ ಪಲ್ಲವಿ ॥

೧
ಎದ್ದಿತೆದ್ದಿತೋ ತಾ ಮೈ ಮುರಿದು
ದೇಟುಗೀಟನಲಿ ನನೆಕೊನೆ ಕೊರೆದು
ತೊಂಗೆ ತೊಗಲಲಿ ಅದೆ ಹರಿವರಿದು-
ಮುಸುಕ ಹಿಂದೆ ತಳ್ಳೀ ಇಗೊ....॥

೨
ಎಲೆಯಲೆಯಲಿ ಅದು ಒಲೆತು ನಲೆದಿತೋ
ಮುಗುಳು ಮೊಗ್ಗ ಅರಳಿಸುತ ಕೆಲೆದಿತೋ
ಮಧುಗಾನದಿ ತನ್ನೊಳಗನುಲಿದಿತೋ....
ಆಗಿ ಗಾಳಿ ಬಳ್ಳೀ ಇಗೊ......॥

೩
ಪ್ರಕಟವಾಗಿ ಜಗದುಂಬಿ ತೊಳಗಿದೆ
ಜಾಗ್ರತಿಯಲಿ ಸ್ವಪ್ನವೂ ಮುಳುಗಿದೆ
ಸಫಲವಾಗಿ ಜೀವದಲೆ ಒಳಗಿದೆ-
ಮಿಕ್ಕ ಮೀಸಲಲ್ಲೀ ಇಗೊ.....॥

೪
ದೇವ ಹೇವ ಭಾವದಲಿ ಬೆರೆದಿತೋ
ನಾಮುಗ್ರಾಮು ಎಲ್ಲವನು ಮರೆದಿತೋ
ಗಾನ ತಾನ ಗೀತದೊಳೆ ಹರೆದಿತೋ-
ಹೊರಗೆ ಸೂಸಿಚೆಲ್ಲೀ ಇಗೊ....॥

೫
ಯಾವ ಕೃಷ್ಣನವ ಊದಿದ ಮುರಲೀ
ಅಡಗಿದ ಪ್ರೀತಿಯೆ ಒಡಮೂಡಿರಲೀ
ಪ್ರಳಯ ಜಯಿಸಿ ತಾನೀಸಿಯೆ ಬರಲೀ-
ಅಡುತಿರಲು ತಿಳ್ಳೀ, ಇಗೊ ಓಡಿ ಬಂದಿತಿಲ್ಲಿ॥

---

ಭಾವ : ಒಂದು ಭಾವಗೀತ.

ಶಬ್ದಾರ್ಥ : ತೊಂಗೆ=ಜೋಲುಬಿದ್ದ. ಹರಿವರಿ=ವ್ಯಾಪಿಸು. ಒಲೆ=ತೂಗುಡು. ಉಲಿ=ಕೂಗು, ಹೇಳು. ತೊಳಗು=ಹೊಳೆ, ಪ್ರಕಾಶಿಸು. ಮೀಸಲು=ಪ್ರತ್ಯೇಕವಾಗಿ ತೆಗೆದಿರಿಸಿದ ಯಾವುದಾದರೂ ವಸ್ತು. ಹೇವ=ಲಜ್ಜೆ, ದುಃಖ. ಗ್ರಾಮ=ಒಂದು ರಾಗ ವಿಭೇದ. ಒಡಮೂಡು=ಪ್ರಕಟವಾಗಿ ಕಾಣು.



# ೩೪ ಪ್ರಾಣಿಗಳು

೧
ಜಗದೊಳು ತುಂಬಿಹರೋ ಜನರು।
ಹುಲಿಮಂಗನ ಸಂತತಿಯವರು॥

೨
ಬೆಕ್ಕಿನ ಜಾತಿಯ ತಿನಸಿಗರು।
ಹಡೆದ ಬದುಕನೇ ತಿನುವವರು॥

೩
ಕುರಿಗಳ ಹಿಂದೇ ಕ್ರೂರತನ।
ಎದುರು ಮೊದಲು, ಕೊನೆ ಪಲಾಯನ॥

೪
ಹೊಟ್ಟೆಯ ಕಿಚ್ಚಿನ ಕಡುಶೌರ್ಯ।
ಹುಲಿ ಜಾತಿಗೆ ಸೇರಿದ ಕ್ರೌರ್ಯ॥

೫
ಅದೊ ಹರುಹಿದೆ ಮಂಗನ ಹಿಂಡು।
ನರಚೇಷ್ಟೆಯ ವಾನರ ದಂಡು॥

೬
ಹುಬ್ಬಿನ ಹಿಗ್ಗೇ ವಿಚಾರವು।
ಹಲ್ಕಿಸಿವುದೆ ಸರಿ ಪ್ರಚಾರವು॥

೭
ಚೇರಾಟವೆ ಜಯಜಯಕಾರ।
ಕಾಲಿನ ಬುದ್ಧಿಯೆ ಆಧಾರ॥

೮
ಎತ್ತಿದ ಬಾಲವೆ ಮಹಾಧ್ವಜ।
ಎತ್ತೆತ್ತೋ ಬಿತ್ತಿದೆ ಬೀಜ॥

೯
ಹುಲಿಕುಣಿತವು ಮಂಗನ ಕಾಟ।
ನಿಲ್ಲಲಿ ಇನ್ನೀ ಚೆಲ್ಲಾಟ॥

೧೦
ಬಿಸುಡಿರಿ ಈ ಮುಸುಕಿದ ಮೋಸ।
ಹರೆದೊಗೆಯಿರಿ ಹಾಕಿದ ವೇಷ॥

೧೧
ಜನಮನದಲಿ ಜನಕತೆ ಹಿಗ್ಗಿ।
ವೈದೇಹರ ಪ್ರಕೃತಿಯ ಸುಗ್ಗಿ॥

೧೨
ವರಿಸಲಿ ಆತ್ಮಾರಾಮತೆಯ।
ಪ್ರೇಮದ ನವನಿಷ್ಕಾಮತೆಯ॥

---

ಭಾವ : ಸ್ಫೂರ್ತ ಉಕ್ತಿಗಳು.

ಶಬ್ದಾರ್ಥ : ವಾನರ=ಕಪಿ, ಮಂಗ. ವೈದೇಹ=ವಿದೇಹದೇಶ. ವರಿಸು=ಆವರಿಸು, ಹರಡು, ವ್ಯಾಪಿಸು. ನಿಷ್ಕಾಮ=ಅನಾಸಕ್ತಿ, ಆಸೆಯಿಲ್ಲದಿರುವಿಕೆ.

ವಿಶೇಷ : ಮಾನವನಲ್ಲಿಯ ಪಶುತ್ವದ ಅರಿವು ಹಾಗೂ ಅದರ ತ್ಯಾಗದ ಎಚ್ಚರಿಕೆ ಈ ಕವನಕ್ಕೆ ಪ್ರೇರಣೆ.



# ೩೫ ನನ್ನದಿರಲಿ ನಿನ್ನದಿರಲಿ

ನನ್ನದಿರಲಿ, ನಿನ್ನದಿರಲಿ, ಸಂಚಿತ ಅದು ಆರದೇ
ವಂಚಿತವಾಗದು ಅದು ಮುಂದೆ ಎಂದೂ ಬಾರದೇ
ನಮ್ಮ ಸೂತ್ರಧಾರ ದೈವ ಕೃಪಾರಸವ ಕರೆಯಿಸಿ
ಹೃದಯದೊಂದು ಪರಿಯ ಕಂಡು ಬಿಡಿಸಬಹುದು ಮರೆಯಿಸಿ.

---

ಭಾವ : ಸೂತ್ರಧಾರದೈವದ ಕ್ರಿಯೆಯನ್ನು ಕುರಿತು. ನನ್ನ ದೈವ ಎಂಬುದು ಪೌರುಷ. ಅವನ (ನಿನ್ನ) ದೈವ ಎಂಬುದು ಸಂಚಿತವಾದ ಲೆಕ್ಕ. ಇದು ವಿವೇಕ.

ಶಬ್ದಾರ್ಥ : ಸಂಚಿತ=ಕೂಡಿಟ್ಟ, ಶೇಖರಿಸಿದ.



# ೩೬ ಹೋರಾಡು ಹೋರಾಡು

೧

ಎಚ್ಚರೆಚ್ಚರು! ಏಳು! ಎಚ್ಚರು!
ನಿದ್ದೆಹೋಗದಿರೆಚ್ಚರ;
ಸೂರೆಹೋದೀತೆಲ್ಲ; ನೀನೇ
ಸೆರೆಗೆ ಸಿಕ್ಕೀ ಬೆಚ್ಚರ!

೨

ಹೋರು ಹೋರಲೆ ಹೋರಿ, ಹೋರೆನೆನ್ನುವ ಪೋರ,
ಹೋರೆ ಹೊಗದಿರು; ಹೋರಿ ಹೊರವನಾಳು;
ಹೋರೆ ಹೊರೆಯಲ್ಲ; ಭಾಪುರೆ! ಪುರುಷ ಪರಮೇಶ
ಅವನ ಹೋರಿಯೆ! ಏಳು ಎಲ್ಲ ತಾಳು.

---

ಭಾವ : ಜೀವನದ ಸಂಗ್ರಾಮು ಕಂಡಾಗ ಡಾರವಿನ್‌ನ ಉತ್ಕ್ರಾಂತಿ ವಾದವೇ ನಿಜವೆನಿಸಿಬಿಡುವದು. ಆಗ ಭಯವಾಗುವದು. ಆದರೆ ಮಾನವನ ಉತ್ಕ್ರಾಂತಿ ಇಲ್ಲಿಯೇ ನಿಂತಿಲ್ಲ ಎಂದು ತೋರಿದಾಗ ಹೊಸ ಅಭಯ ಮೂಡುವದು.

ಶಬ್ದಾರ್ಥ : ಬೆಚ್ಚರ-ಬೆಜ್ಜರ=ಕಕ್ಕಾಬಿಕ್ಕಿ, ತಬ್ಬಿಬ್ಬು, ಹಾದಿಕಾಣದಂತೆ ಆಗು. ಹೋರೆ=ಅದೃಷ್ಟ, ದೈವ, ಕೆಲಸ, ಕಸಬು. ಹೋರಿ=ವೃಷಭ, ಗೂಳಿ, ದನ.



## ೩೭ ಮೂಷಿಕಾಸ್ವಯಂವರ

ಇಲಿಮರಿ ಸುರಸುಂದರಿ ಆದರು ಕಷ್ಟ
ಅವಳಿಗೆ ಹೆಗ್ಗಣ-ಪತಿಯೇ ಶ್ರೇಷ್ಠ.

೧

ಗುಡ್ಡ : ನಾನೇ ಪರ್ವತರಾಜ
ನೆಲದ ಮೇಲೆ ನನಗಿಂತ ಎತ್ತರವು
ಇದ್ದರೆ, ಬರಲವರಿಂದುತ್ತರವು.
ನನ್ನಿಂದಲೆ ಹೊಳೆ, ಹರಿವವು ಮುಂದೆ
ನನ್ನ ತಗ್ಗಿನಲೆ ಬೀಳ್ವವು ಎಂದೇ
ದಿಡುಗೋ ಗುಡುಗೋ ಜೋಗಪ್ರಪಾತ
ನನ್ನಿಂದಲೆ ಆ ಅರಣ್ಯಜಾತ
ಇಲಿಮರಿ : ಗುಡ್ಡವು ಮೇಲ್ಬಿದ್ದರೆ ಮೈಯೇಪುಡಿಪುಡಿ
ಆಗಲೊಲ್ಲೆ ನಾ ಇಂದಿಗೆ ಹುಡಿ ಹುಡಿ

೨

ಗಾಳಿ : ನಾನೋ ಮಾರುತರಾಯ
ಬಾನೊರೆಗಿರುವದು ನನ್ನದೆ ಕಾಯ
ನನ್ನಿಂದಲೆ ಜೀವನದುಸಿರಾಟಾ
ನಾನಿದ್ದರೆ ಸವಿ ಊಟಾ ನೋಟಾ
ನಾನೊಳಗಿದ್ದಾಡಿಸುವದೆ ಪ್ರಾಣ
ನಾ ಹೊರಬಿದ್ದರೆ ಜಗ ನಿತ್ರಾಣ
ಇಲಿಮರಿ : ಒಣ ಎಲೆ ಹಾರಿಸುವವನೋ ನೀನು
ಧೂಳಿ ಎಬ್ಬಿಸಿದರಾಯಿತು ಏನು?
ಒಪ್ಪಿದೆ, ಗುದುಮುರಿಗೆಗೆ ಮುದಿಮರ ಬಿದ್ದಾವು
ಗುಡ್ಡ ಇರಲಿ, ಮೊರಡಿ ಕೂಡ ಅಲುಗದೆ ಇದ್ದಾವು
ಧಿಕತೋಂ ಥಕತೈ ಹೊಗಳಬೇಡ ಆ ಮಾಯದ ಮಾಟ
ಬರಿಬಯಲಾಟ
ಮನೆ ಕಟ್ಟುವರೇ ಗಾಳಿಗೆ ನೆಚ್ಚಿ?
ನಾನಲ್ಲವು ಅಂಥಾಹುಚ್ಚಿ

೩

ರವಿ : ನಾನೇ ರವಿರಾಜ
ನನ್ನಿಂದೀ ಜಗ ಬೆಳಕನು ಕಾಂಬುದು
ನನ್ನಿಂದಲೆ ಅದು ಮಳೆ ಬೆಳೆ ಉಂಬುದು

ಇಲಿಮರಿ : ಏನೀ ರವಿ ಇವ ಯಾವ ಹೆಚ್ಚಿನವ ?
ಮೋಡ ಬಂದೊಡನೆ ಕಣ್ಣು ಮುಚ್ಚುವವ
ಬೇಡ ಬೇಡ ಹುಸಿಬೆಳಕು ಬಢಾಯಿ
ಉರಿವವನೊಡನೆ ಏಕೆ ಲಢಾಯಿ ?

೪

ಮೋಡ : ಮಳೆಯೆಂಬುದು ನನ್ನ ಕೃಪಾ-ಜಲ-ಧಾರೆ
ಬಿಚ್ಚಿ ಹೇಳುವದು ಏತಕೆ ಬೇರೆ ?
ಮಳೆಯಿರದಿರೆ ಎಲ್ಲವು ಮಟಮಾಯ
ಜೀವನಕಧಿಪತಿ ನಾ ಮಳೆರಾಯ.

ಇಲಿಮರಿ : ನಿನ್ನ ಬಣ್ಣವೋ ಕಣ್ಣಿಗೆ ಮೆಚ್ಚು
ಆದರೆ ಗಾಳಿಯುನಿನಗಿಂತಲು ಹೆಚ್ಚು
ಬೆನ್ನೊಗ್ಗಿಟ್ಟೋಡುವೆ ಗಾಳಿಗೆ ನೀನು,
ಜಂಭವ ಬಿಡು ಇದು ಕಂಡಿಹೆ ನಾನು.

೫

ಇದ ಕಾಣುತ 'ಓಹೋ' ಋಷಿ ಎಂದ
ಅವರವರಿಗೆ ಅವರಾ ಜಾತಿಯೆ ಚೆಂದ.

---

ಭಾವ : ಗಣಪತಿಗೆ ಇಲಿ ವಾಹನ ಎಂಬುದು ಬಹಳ ಜನ ಬಲ್ಲರು. ಆದರೆ ಒಬ್ಬ ಮೂಷಿಕೆ ಎಲ್ಲ ದೇವತೆಗಳನ್ನು ಬಿಟ್ಟು ಒಬ್ಬ ಹೆಗ್ಗಣ-ಪತಿಗೆ ಹೇಗೆ ಮಾರುಹೋದಳು ಎಂಬ ರೂಪಕ ಕಥೆಯನ್ನು ಕ್ವಚಿತ್ ನಾಟಕೀಯ ರೂಪದಲ್ಲಿ ಮಂಡಿಸಲಾಗಿದೆ.

ಶಬ್ದಾರ್ಥ : ಗುದುಮುರಿಗೆ=ಗುದ್ದಾಟ, ಉಸಿರು ಕಟ್ಟಿಸುವುದು. ಮೊರಡಿ=ದಿನ್ನೆ, ಎತ್ತರ ಪ್ರದೇಶ. ಮೂಷಿಕ=ಇಲಿಮರಿ.

# ೩೮ ಗೆಳತಿ

೧
ಆ ನಾನೊ! ಆ ನೀನೊ!
ಎಂದು ಕೂಡಿದೆವೇನೊ!
ಈ ನಾನು ಈ ನೀನು
ಈಗ ಆಗಿ
ಇದಿರು ಬದಿರಿಗೆ ಬಂದು
ಸ್ಮಿತ ವಿಸ್ಮಿತದಿ ನಿಂದು
ಬಿಂಬ ಪ್ರತಿಬಿಂಬದೊಲು ಕಂಡೆವೇನೋ?

೨
ಏನ ಕಂಡೆವೊ ಏನೊ
ಮನ ನೆನೆಯುತಿದೆ ಏನೊ
ಕಣಸು ಏನೇನೊ ಮೂಡುತ್ತಲಿಹವು.
ಕಣಸೊ ಕನಸೋ ಕಾಣೆ
ನೀನೊ ಅದ್ಭುತಜಾಣೆ
ಮುಟ್ಟದೆಯೆ ಮುರುಕ ತೋರಿದ ವೀಣೆ.

೩
ಮೌನ ಕಂಪಿಸುತಿರಲು
ಸುಪ್ತಿ ಜೊಂಪಿಸುತಿರಲು
ಬಯಲ ಬಸಿರಲಿ ನೀರು ಉರಿದೆದ್ದಿತು.
ತಿಂಗಳನ ಚುಕ್ಕೆಯೋ
ಅಹುದೇಕೆ ನಕ್ಕೆಯೋ
ಗ್ರಹಮಾಲೆಯನೆ ನೀನು ಹೆಣೆಯುತಿರುವೆ.

೪
ಯಾವ ಗಿಳಿಯೋ ಅಳಿಯೊ
ಗಳಪಿ ಗುಂಗುಣಿಸಿತೋ
ಕೂ ಹೂ ಹು ಹೂ ಹೂ ವು ಕುಕಿಲುತಿರಲು
ಮಾವು ಹೂವಾಗಿತ್ತು.
ಬೇವು ಸವಿಯಾಗಿತ್ತು.
ಕಣ್ಣು ಹುಬ್ಬು ಕೂಡಿ-ಕುಣಿಯುತಿತ್ತು.

---

ಭಾವ : ಗೆಳೆತನ ಕುರಿತು ಒಂದು ಭಾವಗೀತ.

ಶಬ್ದಾರ್ಥ : ಸ್ಮಿತ=ಮುಗುಳು ನಗೆ. ವಿಸ್ಮಿತ=ಆಶ್ಚರ್ಯ. ಮುರುಕ=ಒಯ್ಯಾರ, ಡೌಲು. ಗಳಹು=ಹರಟು, ಅತಿಯಾಗಿ ಮಾತನಾಡು.



## ೩೯ ಸೃಷ್ಟಿ

೧

ಕಿವುಡಿ ನರ್ತಕಿಯು ಕುಣಿಯೆ, ಬಾರಿಸುವ
ಕುರುಡು ಹಾಡುಗಾರ
ಅಂಗ-ಭಂಗಿ-ಲಾವಣ್ಯ ಬಣ್ಣಿಸುವ
ಮೂಕ ಚಿತ್ರಗಾರ.

೨

ತೊಟ್ಟಿಲಲ್ಲಿ ಹಾಕುವರದಾರು ಆ
ಹೆಸರನಿಡುವರಿಲ್ಲ.
ಯಾವ ಪ್ರೀತಿಗಿದನಾರು ಹಡೆದರೋ
ಸೃಷ್ಟಿಕರ್ತ ಬಲ್ಲ.

೩

ಸಂತೆಮಂದಿ ಹಿಮ್ಮೇಳದಲ್ಲಿ ಗೊಂ-
ದಳದ ಕುಣಿತ ನಡೆಯೆ.
ಬೀಸು ಗಾಳಿಯಲಿ ಬನವೆ ಒಲೆದ ಒಲು
ಅಂದ ಚೆಂದ ಪಡೆಯೆ.

೪

ರವಿಯ ಬೆಳಕಿನಲಿ ಅಡಗಿಕೊಂಡು
ತಾರೆಯರು ನೋಡುತಿಹರು.
ಸ್ತಬ್ಧಶಾಂತ ಹುಸಿಗಾಲದಲ್ಲಿ
ಯಾರಾರೊ ಹಾಡುತಿಹರು.

೫

ಕತ್ತಲನ್ನು ಬೆನ್ನಟ್ಟಿ ಬಹುದೊ ಈ
ಬೆಳಕು ನಸುಕಿನಲ್ಲಿ.
ಬೆಳಕೆ ಬೆಂಬತ್ತಿ ಹೋಗುತಿಹುದೊ ಆ
ಸಂಜೆ ಮುಸುಕಿನಲ್ಲಿ.

೬

ರಾಗರತಿಯ ಕಥೆಯಂತೆ ಚಿತ್ರಗತಿ-
ಯಾಗಿ ತಿರುಗುತಿಹುದು.
ಹಗುಲು ರಾತ್ರಿಗಳು ಒಂದನೊಂದು ಬೆಂ।
ಬಿಡದೆ ಮರಳುತಿಹವು.

---

ಭಾವ : ಸೃಷ್ಟಿಯ ಮೌನಚಿತ್ರಕಂಡಾಗ ಸ್ಫುರಿಸಿದ ಭಾವಲಹರಿ.

ಶಬ್ದಾರ್ಥ : ಗೊಂದಳ=ಸಮೂಹ.



# ೪೦ ಮುಕ್ತಕಂಠ

೧
ಬಂದ ಮಾತ ಅಂದುಬಿಡುವೆ
ನಡೆವ ಮಾತ ನೋಡಿಬಿಡುವೆ
ಆಡಿಬಿಡುವೆ ಹಾಗೆ ಬಿಡುವೆ
ನಿಲ್ಲಗೊಡೆನು ನಡುವೆ ನಡುವೆ.
೨
ಹರಿವ ಬಾಳ ತಡೆವುದೇಕೆ
ಬಿಟ್ಟ ಹಾದಿ ಹಿಡಿವುದೇಕೆ ?
ನೆಲದ ನೀರಿನಾಟವೆಲ್ಲ
ಬೆಳಕಿನೋಟ-ನೋಟದೊಡನೆ.
೩
ಗತಿಯು ತನ್ನ ಛಂದದಲ್ಲಿ
ಭಾವ ತನ್ನ ಬಂಧದಲ್ಲಿ
ಹರಿವೆ ನಿಲ್ಲೆ ಹೊಂದದಲ್ಲಿ
ಬಲ್ಲೆ ಎಲ್ಲು ಒಂದರಲ್ಲಿ
೪
ಹೊಳೆಯ ನೀರು ಒಡಲಿನಲ್ಲಿ
ಒಡವೆಯಂತೆ ಒಡೆಯನಲ್ಲಿ.
ಬರಿದ ಮಾತ ಅಂದುಬಿಡುವೆ.

---

ಭಾವ : ಉಕ್ತಿಗಳ ವಿಲಾಸವನ್ನು ಕುರಿತು.



# ೪೧ ಅಮೃತಾನುಭವ

೧
ತಾವು ಇಬ್ಬರೂ ಒಬ್ಬರೆನ್ನುವದ ತೋರಿಸುವರು ಸತತ
ಅಗಲಿ ಕೂಡಿ ಒಂದಾಟ ಹೂಡಿ ಜಗಭರಿತರಾಗಿ ವಿತತ
ಬಿಂದುರಜದ ಸಂಧಾನದಂತೆ ಈ ತಂದೆ-ತಾಯಿಯೊಂದು.
ಶರಣು ಹೋಗುವೆವು ನಮ್ಮ ಪಡೆದವರ ನಾವೆ ಪಡೆಯಲೆಂದು.
೨
ಬೇರಿಗಿವನು, ಗೊನೆಫಲದಲಿವನು, ನಡುಮೈಯೊಳಿವನೆ ಇವನು
ಮೂಲ ಮಧ್ಯ ಮತ್ತಗ್ರದಲ್ಲಿ ಒಂದಾದ ಮೂರ್ತಶಿವನು
ಸುತ್ತಲೆಲ್ಲ ಸರ್ವತ್ರ ಮೇಲು ಒಳ-ಹೊರಗು ಅವನ ಕಾಂಬೆ
ಮೂರ ಮೀರಿ ಒಳಗೊಂಡ ಪೂರ್ಣಶಂಭುವಿಗೆ ನಮೋ ಎಂಬೆ.

---

ಭಾವ : ಅಮೃತಾನುಭವದ ೪ ಮತ್ತು ೫ನೆಯ ನುಡಿಯ ಇನ್ನೊಂದು ರೀತಿಯ ಭಾವಾನುವಾದ.

# ೪೨ ಆನಂದಲಹರಿ

೧
ಶಿವನು ಶಕ್ತಿಯುತನಾದರೇಯೆ ಜಗ ಪಡೆಯಲಾಪನವನು।
ಇಲ್ಲದಿರಲು ಮಿಡುಕಾಟ ಕೂಡ ಅವಗಿಲ್ಲ ಅವನು ಶವನು॥
ಹರಿಗೆ ಹರಗೆ ಬ್ರಹ್ಮಾದಿಗಳಿಗೆ ನೀ ಪೂಜ್ಯೆ, ಪುಣ್ಯವಿರದೆ।
ಯಾವನವನು ಪೊಡಮಡುವನವ್ವ, ಹೊಗಳುವನು ಹಾಡಿ ಬರಿದೆ?॥
೨
ನಿನ್ನ ಅಡಿಯ ತಾವರೆಯ ತಳದ ಹುಡಿಯಿನಿಸು ತಾಕಲಾಗಿ।
ಅಂಥ ಕೈಲಿ ಕಟ್ಟಿದನು ಬ್ರಹ್ಮಬ್ರಹ್ಮಾಂಡ ಕೋಟಿಯಾಗಿ॥
ಅವುಗಳನ್ನೆ ಸಾಸಿರದ ಶಿರದಿ ಹೊತ್ತಿಹನು ಶೇಷಹರಿಯು।
ಅವುಗಳಾದ ಬೂದಿಯನೆ ಬಳಿದುಕೊಳ್ಳುವನು ರುದ್ರದೊರೆಯು॥
೩
ಆ ಅವಿದ್ಯೆಯೊಳಗತ್ತಲಲ್ಲಿ ಬೆಳಕೊತ್ತು ದೀಪ ನೀನು।
ಜಡದ ಒಡಲ ಚೈತನ್ಯವೆಂಬ ತೆನೆತುಂಬ ನೀನು ಜೇನು॥
ನೀನು ನಮ್ಮ ಬಡತನವ ಹರೆವ ಚಿಂತಾಽಮಣಿಯ ಹಾರ।
ಜನ್ಮ ಜಲಧಿಯಲಿ ಶ್ರೀವರಾಹನೊಲು ನೀನೆ ಅಂತಪಾರ॥
೪
ನಿನ್ನ ಮೊಗದ ಚಂದಿರನ ನಗೆಯ ಬೆಳುದಿಂಗಳಿಂದ ಇಡಿದು।
ಈ ಚಕೋರಗಳ ಬಾಯಿ ಕಟ್ಟಿ ತಾ ಮೇಲುಸವಿಯ ಕುಡಿದು॥
ಅರುಚಿ ಕಳೆಯೆ, ಹಾತೊರೆಯುತಿಹವು, ದಿನ ರಾತ್ರಿ ಚಂದ್ರ ಕಂಡು।
ಚಂದ್ರವೆಳಕಿನಂಬಲಿಯ ರುಚಿಯ ಹುಳಿಗಂಜಿ ನಂಜಿಕೊಂಡು॥

-ಔದುಂಬರಗಾಥೆ ಸಂಪುಟ-೧, ಕವನ-೧೫೭೦ರಲ್ಲಿ "ಸೌಂದರ್ಯ ಲಹರಿ" ಎಂದು ಇದೆ.

---

ಭಾವ : ಆದಿ ಶಂಕರಾಚಾರ್ಯರ "ಸೌಂದರ್ಯ ಲಹರಿ"ಯ ಪ್ರಾರಂಭದ ನಾಕು ನುಡಿಗಳ ಭಾವಾನುವಾದ.



# ಡಾ|| ದ. ರಾ. ಬೇಂದ್ರೆಯವರ ಜೀವನ ಕಥೆಯ ಹಂದರ

## ಜನನ-ವಿವಾಹ

೩೧-೧-೧೮೯೬ : ಮಾಘವದ್ಯ ಪ್ರತಿಪದಾ-ಗುರುಪ್ರತಿಪದಾ, ಮನ್ಮಥನಾಮ ಸಂವತ್ಸರ-ಧಾರವಾಡ, ಪೋತನೀಸ ಓಣಿಯಲ್ಲಿ ಜನನ.

೧೮೯೯ : ನೀರಕುತ್ತು ದಾಟಿತು. ಜೇಷ್ಠವೋ ಶ್ರಾವಣವೊ ಇರಬೇಕು. ಹಾಲಗೇರಿ ಕೆರೆಯಲ್ಲಿ ಬಿದ್ದು ಜೀವಂತ ಪಾರಾದದ್ದು.

೧೯೦೭ : ತಂದೆ-ರಾಮಚಂದ್ರ ತೀರಿಕೊಂಡರು.

೧೯೦೨-೧೯೧೩ : ಧಾರವಾಡದಲ್ಲಿ ಪ್ರಾಥಮಿಕ ಶಿಕ್ಷಣದಿಂದ ಮ್ಯಾಟ್ರಿಕ್ ಪಾಸಾಗುವವರೆಗೆ.

೧೯೧೩ : ಅಜ್ಜ-ತಾಯಿಯ ತಾಯಿ. ಗೋದುಬಾಯಿ ತೀರಿಕೊಂಡರು,

೧೯೧೪ : ಪುಣೆಯ ಫರ್ಗ್ಯುಸನ್ ಕಾಲೇಜು ಸೇರಿದ್ದು.

೧೯೧೬-೧೭ : ವಿವಿಧ ಛಂದಸ್ಸುಗಳಲ್ಲಿ, ಕನ್ನಡ, ಮರಾಠಿ, ಇಂಗ್ಲೀಷ್ ಹಾಗೂ ಸಂಸ್ಕೃತದಲ್ಲಿ ಕವಿತಾ ರಚನೆ ಹಾಗೂ ಶ್ರೇಷ್ಠ ಕವಿಗಳ ಕವನಗಳ ಅನುವಾದ.

೧೯೧೮ : ಬಿ. ಎ. ಪದವಿ. ಜೂನ್ ೪ರಂದು. ಧಾರವಾಡದ ವಿಕ್ಟೋರಿಯಾ ಹೈಸ್ಕೂಲಿನಲ್ಲಿ ಶಿಕ್ಷಕ. (ಈಗಿನ ವಿದ್ಯಾರಣ್ಯ ಹೈಸ್ಕೂಲು)

೧೯೧೯ : ಲಕ್ಷ್ಮೀಬಾಯಿ ಅವರೊಂದಿಗೆ ಹುಬ್ಬಳ್ಳಿಯಲ್ಲಿ ವಿವಾಹ. 'ವಾಗ್ಭೂಷಣ' ಸಂಪಾದಕ ವರ್ಗದಲ್ಲಿ ಸೇರ್ಪಡೆ.

### ಸಂತತಿ

೧. : ಕ್ಷೇಮೇಂದ್ರ (ಜನನ : ೧೯೨೨ ಧಾರವಾಡ; ಮರಣ ; ೧೯೨೩)
'ಮೊದಲಿನ ಫಲವೊಂದು ಮೀಸಲು ಮಣ್ಣಿಗೆ.'

೨. : ರಾಮು (ಜನನ ೧೯೨೪ ಹಾನಗಲ್ಲ : ಮರಣ ೧೯೪೪)
'ಹುಸಿನಗುವ ಕೂಸಿನ ಹೊಸ ಹೊಸ ಆಟಿಕೆ.'

೩. : ಭಾಸ್ಕರ (ಜನನ ೧೯೨೭ ಧಾರವಾಡ ; ಮರಣ ೧೯೨೭)
'ಭೆಟ್ಟಿಗೆ ಬಂದನು ಹೊಸದೊಬ್ಬ ಕಂದನು ಅಥಿತಿಯೋ ಎಂಬಂತೆ.'

೪. : ಪಾಂಡುರಂಗ (ಜನನ:೧೯೨೮, ಧಾರವಾಡ ಮರಣ : ೧೮-೧೧-೨೦೦೩)
'ಹುಡುಗನ ಒಡನಾಟವು ಹುಡುಗಾಟ ಮಾಡಿದವು.'

೫. : ಲಲಿತಾ (೧೯೩೪, ಧಾರವಾಡ; ಮರಣ ೧೯೩೪)
'ಆ ಕೂಸ ಕಳಕೊಂಡು ನೀನೆಂತೊ ಉಳಕೊಂಡು
ಲಾಲಿತ್ಯವಿಲ್ಲದ ಶೈಲಿಯೊಲು.'
('ನೀ ಹಿಂಗ ನೋಡಬ್ಯಾಡ ನನ್ನ' ಕವನದ ವಸ್ತು)

೬. : ವಾಮನ (ಜನನ : ೧೯೩೫, ರಾಣೆಬೆನ್ನೂರು)

೭. : ಪ್ರೇಮಾ (ಜನನ : ೧೯೩೭, ಧಾರವಾಡ; ಮರಣ : ೧೯೩೭)

೮. : ಮಂಗಲಾ (ಜನನ : ೧೯೩೯, ಧಾರವಾಡ)

೯. : ಆನಂದ (ಜನನ : ೧೯೪೩, ಧಾರವಾಡ; ಮರಣ : ೧೯೪೪)

## ಇತರ

೧೯೨೨ : ದಾವಣಗೇರಿಗೆ ಸಾಹಿತ್ಯ ಸಮ್ಮೇಲನಕ್ಕೆ ಹೋದದ್ದು.

೧೯೨೨ : ''ಕೃಷ್ಣಾಕುಮಾರಿ'' ಮೊದಲನೆಯ ಆವೃತ್ತಿ ಪ್ರಕಟವಾದದ್ದು.

೧೯೨೩ : ವಿಜಾಪೂರದ ಸಾಹಿತ್ಯ ಸಮ್ಮೇಲನಕ್ಕೆ ಹೋದದ್ದು.
'ಜಯ ಕರ್ನಾಟಕ' ಪತ್ರಿಕೆಯೊಂದಿಗೆ ಸಂಬಂಧ, ಮಧುರಚೆನ್ನರ ಭೆಟ್ಟಿ.

೧೯೨೪ : ತಾಯಿ-ಪಾರ್ವತಿ-ಅಂಬಿಕೆ ತೀರಿಕೊಂಡದ್ದು.
'ತಾಯಿ ಗಿಡವು ಮಾಯವಾಯಿತಲೇ!'
- 'ಜೇನುಹುಟ್ಟು' ಕೈ ಬರಹ ಪತ್ರಿಕೆ ಎಳೆಗೆಳೆಯರಾದ ವಿದ್ಯಾರ್ಥಿಗಳ ಮೂಲಕ ಹೊರಡಿಸಿದ್ದು.

೧೯೨೬ : 'ಸ್ವಧರ್ಮ' ಪತ್ರಿಕೆಯ ಸಂಪಾದಕರು.
- ಗೆಳೆಯರ ಗುಂಪಿನಿಂದ ನಾಡ ಹಬ್ಬ ಪ್ರಾರಂಭ.

೧೯೨೮ : 'ನನ್ನದು ಈ ಕನ್ನಡ ನಾಡು' ಕವನ ಸಂಗ್ರಹದ ಸಂಪಾದಕರು.

೧೯೨೯ : I) ಕಕ್ಕ ಬಂಡೋಪಂತ ಬೇಂದ್ರೆಯವರು ದ. ರಾ. ಬೇಂದ್ರೆಯವರಿಗೆ ೫-೧೧-೧೯೨೯ ರಂದು ವಾಸಕ್ಕಾಗಿ ಸಾಧನಕೇರಿಯಲ್ಲಿ ಒಂದು ಮನೆಯನ್ನು ಕಾಣಿಕೆಯಾಗಿ ಕೊಡಿಸಿದ್ದು.
೧೩, ಶ್ರೀಮಾತಾ, ಸಾಧನಕೇರಿ, ಧಾರವಾಡ - ನಿವಾಸ.
'ಮಲೆನಾಡ ಸೆರಗಿನ ನೆರೆಗಿದ್ದ ಮನೆಯೊಂದು ಮಮತೆಯ
ಕುರುಹಾಗಿ ತಾ ದೊರಕಿತು.'

II) ಬೆಳಗಾವಿಯ ಸಮ್ಮೇಳನದಲ್ಲಿ -
'ಹಕ್ಕಿ ಹಾರುತಿದೆ ನೋಡಿದಿರಾ' ಕವನ ವಾಚನ.

III) ೧೧-೧೧-೧೯೨೯ ರಂದು ಶ್ರೀ ಆಲೂರ್ ವೆಂಕಟರಾವ್ ಇವರಿಂದ 'ಜಯ ಕರ್ನಾಟಕ' ಕೊಂಡದ್ದು.
ಸಂಪಾದಕರಾಗಿ ಕಾರ್ಯ ನಿರ್ವಹಣೆ.
''ಜಯ ಕರ್ನಾಟಕವೆನ್ನುತ ಗೆಳೆಯರ ಕನ್ನಡವಾಸೆಯು ಗುಡಿಕಟ್ಟಿತು.''
'ನರಬಲಿ' - ಕವನವು ಬಲಿಮಾಡಿತೆನ್ನನು,
ಹೆಳವನಿದ್ದಲ್ಲಿಗೆ ಹೊಳೆ ಬಂದಿತು.''

೧೯೩೦ : 'ಹಕ್ಕಿ ಹಾರುತಿದೆ' ಕವನ ಸಂಗ್ರಹದ ಸಂಪಾದಕರು.

೧೯೩೨ : ಹಿಂಡಲಗಿ ಜೇಲುವಾಸ. ಮುಗದ ಎಂಬ ಹಳ್ಳಿಯಲ್ಲಿ ದಿಗ್‌ಬಂಧನವಾಸ.
''ಪ್ರಾಣದ ಒಗರಷ್ಟು ಹಿಂಡಿತು ಹಿಂಡಲಗಿ,
ಮುಗದದ ಮಳೆಗಾಗಿ ಮುಂದೆಳೆದಿತು.''

೧೯೩೨ : ''ಗರಿ'' ಮೊದಲನೆಯ ಆವೃತ್ತಿಯು ಹೊರ ಬಂದದ್ದು.

೧೫-೮-೧೯೩೩ : 'ಜಯ ಕರ್ನಾಟಕ' ಸಂಬಂಧ ಮುಕ್ತಾಯ.
ಗೆಳೆಯರ ಗುಂಪಿನ ಸ್ಫೋಟ, ವಿಘಟನೆ.

೧೯೩೩ : ಎಂ. ಎ. ಅಭ್ಯಾಸಕ್ಕಾಗಿ ಪುಣೆಗೆ ಪ್ರಯಾಣ.
'ಪುಣೆಯಲ್ಲಿ ಕಳೆದಂಥ ಅಜ್ಞಾತವಾಸವ ನೆನೆದರೆ ಮೈಯೆಲ್ಲ ಜುಮ್ಮೆನ್ನುತ್ತ'

೧೯೩೪ : "ಮೂರ್ತಿ" ಮೊದಲನೆಯ ಆವೃತ್ತಿ ಪ್ರಕಟವಾದದ್ದು.

೧೯೩೪ : "ಕಾಮಕಸ್ತೂರಿ" ಮೊದಲನೆಯ ಆವೃತ್ತಿ ಪ್ರಕಟವಾದದ್ದು.

೧೯೩೫ : ಎಂ. ಎ. ಪದವಿ ಪಡೆದದ್ದು,
ಮುಂಬೈಯಲ್ಲಿ ಸಾಹಿತ್ಯ ಸಮ್ಮೇಳನದ ಕವಿ ಸಮ್ಮೇಳನಕ್ಕೆ ಅಧ್ಯಕ್ಷ.

೧೯೩೫-೪೦ : ಡಾ॥ ಮಾಸ್ತಿಯವರ ಸಹಾಯ ಹಸ್ತ ಲಭಿಸಿದ್ದು.
"ದೈವದ ಕೃಪೆಯೆಂದು ಅದ ತಿಳಿದೆನು."

೧೯೩೬ : ವಿಜಯನಗರ ಷಟ್ ಶತಸಾಂವತ್ಸರಿಕ ಉತ್ಸವದ ಕೆಲಸಕ್ಕಾಗಿ
ಹೈದರಾಬಾದ ಪ್ರವಾಸ.

೧೯೩೭ : 'ಸಖೀಗೀತ'ದ ಮೊದಲನೆಯ ಆವೃತಿ ಪ್ರಕಟಗೊಂಡದ್ದು.

೧೯೩೮ : ನಾದಲೀಲೆ, ಉಯ್ಯಾಲೆ, ಪ್ರಕಟಗೊಂಡದ್ದು
"ಜೀವನ" ಪತ್ರಿಕೆಯ ಸಂಪಾದಕ ಆದದ್ದು.

೧೯೩೯ : "ನಿರಾಭರಣ ಸುಂದರಿ," ಹಾಗೂ "ಸಾಹಿತ್ಯ ಮತ್ತು ಸಂಶೋಧನೆ,"
ಕೃತಿಗಳು ಪ್ರಕಟಗೊಂಡದ್ದು.

೧೯೪೦ : ಧಾರವಾಡದಲ್ಲಿ ಸಾಹಿತ್ಯ ಸಮ್ಮೇಳನ.

೧೯೪೧ : ಗದಗ-ವಿದ್ಯಾದಾನ ಸಮಿತಿ ಹೈಸ್ಕೂಲಿಗೆ-ಹೆಡ್ ಮಾಸ್ತರ ಆಗಿ ಹೋದದ್ದು.

೧೯೪೨ : ಹುಬ್ಬಳ್ಳಿಯ ನ್ಯೂ ಇಂಗ್ಲೀಷ್ ಸ್ಕೂಲಿಗೆ ಶಿಕ್ಷಕ.

೧೯೪೩ : ಫೆಬ್ರುವರಿಯಲ್ಲಿ ಪಾಂಡಿಚೇರಿ- ಶ್ರೀಮಾತಾರವಿಂದರ ದರ್ಶನ.
- ಪೂನಾ ಬಿ. ಎಂ. ಸಿ. ಸಿ. ಕಾಲೇಜಿನಲ್ಲಿ ಕನ್ನಡ ಪ್ರಾಧ್ಯಾಪಕ,
"ಮೇಘದೂತ" ಪ್ರಕಟಗೊಂಡದ್ದು.

೧೯೪೪ : ಸೊಲ್ಲಾಪುರದ ಡಿ. ಏ. ವ್ಹಿ. ಕಾಲೇಜಿನಲ್ಲಿ ಕನ್ನಡ ಪ್ರಾಧ್ಯಾಪಕ ಆದದ್ದು.

೧೯೪೪ : ರಾಮ ಹಾಗೂ ಆನಂದ ತೀರಿಕೊಂಡದ್ದು ಸೊಲ್ಲಾಪುರದಲ್ಲಿ.

೧೯೪೫ : ಸೊಲ್ಲಾಪುರ ನೀಲಾನಗರದಲ್ಲಿ ವಾಸ ಪ್ರಾರಂಭ.

೧೯೪೬ : ಗೆಳೆಯರಿಂದ ಸನ್ಮಾನ. ೫೦ನೆಯ ಹುಟ್ಟುಹಬ್ಬ
"ಹಾಡು-ಪಾಡು" ಪ್ರಕಟಗೊಂಡದ್ದು.

೧೯೪೭ : ಭಾರತಕ್ಕೆ ಸ್ವಾತಂತ್ರ್ಯ ಲಭಿಸಿದ್ದು.

೧೯೪೮ : ಗಾಂಧೀ ಮರಣ, ಜೆ.ಕೃಷ್ಣಮೂರ್ತಿ ಮತ್ತು
ಶ್ರೀ ಗುಳವಣಿ ಮಹಾರಾಜರ ದರ್ಶನ.

೧೯೫೦ : ಶ್ರೀಅರವಿಂದರ ನಿರ್ವಾಣ ; ಡಿಶೆಂಬರ-೫. ಹೆಂಡತಿಗೆ ವಿಷಮ ಜ್ವರ.

೧೯೫೧ : "ಗಂಗಾವತರಣ" ಪ್ರಕಟಗೊಂಡದ್ದು. ಸಂಖ್ಯಾಯೋಗ ವಿಚಾರ,
ಮರಾಠಿಯಲ್ಲಿ ವಿಪುಲವಾಗಿ ಬರವಣಿಗೆ.

೧೯೫೨ : ಪ್ರಭಾಕರ ಮಹಾರಾಜರ ದರ್ಶನ.

೧೯೫೩ : ಗೆಳೆಯ ಚೆನ್ನಮಲ್ಲಪ್ಪ-ಮಧುರಚೆನ್ನ-೧೫ ಅಗಸ್ಟರಂದು ಮರಣ.

೧೯೫೪ : ಶ್ರೀರಾಮದಾಸರ ದರ್ಶನ.

೧೯೫೫ : ದಿಲ್ಲಿಗೆ ಕವಿ ಸಮ್ಮೇಳನಕ್ಕಾಗಿ ಹೋದದ್ದು.

೧೯೫೬ : ೬೦ನೇ ಹುಟ್ಟುಹಬ್ಬ. ಧಾರವಾಡ ಆಕಾಶವಾಣಿ ಸಾಹಿತ್ಯ ಸಲಹಾಕಾರ, ಮಗ-ಪಾಂಡುರಂಗನ ವಿವಾಹ,
ಡಾ॥ ಕುವೆಂಪು ಅವರಿಗೆ ಸಾಹಿತ್ಯ ಅಕಾಡೆಮಿ ಬಹುಮಾನ.

೧೯೫೭ : "ಅರಳು-ಮರಳು" ಪ್ರಕಟಗೊಂಡದ್ದು
ಡಾ॥ ರಂ. ಶ್ರೀಮುಗಳಿ ಯವರಿಗೆ ಸಾಹಿತ್ಯ ಅಕಾಡೆಮಿ ಬಹುಮಾನ.

೧೯೫೮ : ಸಾಹಿತ್ಯ ಅಕಾಡೆಮಿ ಬಹುಮಾನ ಯಾರಿಗೂ ಸಿಗಲಿಲ್ಲ.

೧೯೫೮-೫೯ : "ಅರಳು-ಮರಳು" ಸಂಗ್ರಹಕ್ಕೆ ಸಾಹಿತ್ಯ ಅಕಾಡೆಮಿ ಬಹುಮಾನ, ಧರ್ಮಸ್ಥಳಕ್ಕೆ ಹೋದದ್ದು. 'ನಮನ', 'ಸಂಚಯ' ಪ್ರಕಟಗೊಂಡದ್ದು.

೧೯೬೦ : ಡಾ॥ ಕಾರಂತರಿಗೆ ಬಹುಮಾನ.

೧೯೬೧ : ಡಾ॥ ಗೋಕಾಕರಿಗೆ ಬಹುಮಾನ.

---

(ಇಲ್ಲಿಯವರೆಗಿನ ಜೀವನ ಘಟನಾವಳಿಗಳನ್ನು ದ.ರಾ.ಬೇಂದ್ರೆಯವರು ತಮ್ಮ ಆತ್ಮಚರಿತ್ರೆಗೆ ಅನುಬಂಧವಾಗಿ ಪ್ರಕಟಿಸಿದ್ದು "ನಡೆದು ಬಂದ ದಾರಿ" ಸಂ.೩ರಲ್ಲಿ. ಇದಕ್ಕೆ ಐತಿಹಾಸಿಕ ಮಹತ್ವವಿದೆ. ತಮ್ಮ ಸ್ನೇಹಿತರಿಗೆ ಸಿಕ್ಕ ಬಹುಮಾನ ಅಥವಾ ಅವರ ಜೀವನ ಘಟನೆಗಳು ತಮ್ಮ ಜೀವನದ ಪ್ರಮುಖ ಘಟನೆ ಎಂಬುದಾಗಿ ಬೇಂದ್ರೆ ಭಾವಿಸಿದ್ದು ಅನುಕರಣೀಯ. ಸಾಹಿತಿ-ಸಾಹಿತಿ-ಸ್ನೇಹ ಸಂಬಂಧವೇ ಸಂಸ್ಕೃತಿ.)

---

೧೯೬೨ : ತುಮಕೂರಿನ ಪೌರಸಭೆಯ ಸನ್ಮಾನ.

೧೯೬೪ : ಮೈಸೂರು ದಸರಾ ಮಹೋತ್ಸವ ಸನ್ಮಾನ.

೧೯೬೫ : ಮರಾಠಿ "ಸಂವಾದ" ಕೃತಿಗೆ ಕೇಳಕರ ಪ್ರಶಸ್ತಿ.

೧೯೬೬ : ಮೈಸೂರು ವಿಶ್ವವಿದ್ಯಾಲಯದಿಂದ "ಗೌರವ ಡಾಕ್ಟರೇಟ್,"
ಹೈದ್ರಾಬಾದಿನ ಹಿಂದೀ ಪ್ರಚಾರ ಸಭಾದ 'ಸಾಹಿತ್ಯ ಆಚಾರ್ಯ' ಪ್ರಶಸ್ತಿ.
ಶಿರಹಟ್ಟಿಯಲ್ಲಿ ೭೦ನೇ ಹುಟ್ಟುಹಬ್ಬ
ಮೈಸೂರು ಸರ್ಕಾರದ (ಕರ್ನಾಟಕ) ಆಜನ್ಮ ವಿಶ್ರಾಂತಿ ವೇತನ.
ಪತ್ನಿ ಶ್ರೀಮತಿ ಲಕ್ಷ್ಮೀಬಾಯಿಯವರ ನಿಧನ: ೧೭-೮-೧೯೬೬.

೧೯೬೮ : ದಿಲ್ಲಿಯಿಂದ 'ಪದ್ಮಶ್ರೀ' ಪ್ರಶಸ್ತಿ.
ಕರ್ನಾಟಕ ವಿಶ್ವವಿದ್ಯಾಲಯದಿಂದ "ಗೌರವ ಡಾಕ್ಟರೇಟ್."

೧೯೬೯ : ಕೇಂದ್ರ ಸಾಹಿತ್ಯ ಅಕಾಡೆಮಿಯ 'ಫೆಲೊಶಿಪ್'ಗೌರವ-ದಿಲ್ಲಿ.

೧೯೭೨ : ಪರ್ಯಾಯದಲ್ಲಿ ಉಡುಪಿ ಮಠದ ವತಿಯಿಂದ
'ಕರ್ನಾಟಕ ಕವಿ ಕುಲ ತಿಲಕ' ಬಿರುದು. ೭೫ನೇ ಹುಟ್ಟು ಹಬ್ಬದ ಸವಿನೆನಪಿಗಾಗಿ ವರಕವಿ ಬೇಂದ್ರೆಯವರನ್ನು ಕುರಿತು ರಾಜ್ಯ ಸರ್ಕಾರದ ಸಾಕ್ಷಿ ಚಿತ್ರ ನಿರ್ಮಾಣ.

೧೯೭೩-೭೪ : 'ನಾಕುತಂತಿ' ಕವನ ಸಂಗ್ರಹಕ್ಕೆ ಜ್ಞಾನಪೀಠ ಪ್ರಶಸ್ತಿ ಪ್ರದಾನ.

೧೯೭೬ : ವಾರಣಾಶಿ ಕಾಶೀ ವಿದ್ಯಾಪೀಠದಿಂದ "ಗೌರವ ಡಾಕ್ಟರೇಟ್"

೨೬-೧೦-೮೧ : ನಿರ್ವಾಣ - ಮುಂಬೈಯ ಹರಿಕಿಸನ್‌ದಾಸ ಆಸ್ಪತ್ರೆಯಲ್ಲಿ.
"ನಾವು ಬರತೇವಿನ್ನ ನೆನಪಿರಲಿ ತಾಯಿ, ನಂ ನಮಸ್ಕಾರ ನಿಮಗ"



# ಡಾ.ದ.ರಾ.ಬೇಂದ್ರೆಯವರ ಸಾಹಿತ್ಯ ಕೊಡುಗೆ

## ಕವನ ಸಂಗ್ರಹಗಳು-'ಅರಳು ಮರಳು' ಪೂರ್ವದಲ್ಲಿ - ೧೦

೧. ಕೃಷ್ಣಕುಮಾರಿ
೨. ಗರಿ
೩. ಸಖೀಗೀತ
೪. ಮೂರ್ತಿ
೫. ಕಾಮಕಸ್ತೂರಿ
೬. ಉಯ್ಯಾಲೆ
೭. ನಾದಲೀಲೆ
೮. ಕನ್ನಡ ಮೇಘದೂತ
೯. ಹಾಡು-ಪಾಡು
೧೦. ಗಂಗಾವತರಣ

## ಕವನ ಸಂಗ್ರಹಗಳು-'ಅರಳು ಮರಳು' ಅನಂತರದಲ್ಲಿ - ೧೭

೧೧. ಸೂರ್ಯಪಾನ
೧೨. ಹೃದಯ ಸಮುದ್ರ
೧೩. ಮುಕ್ತಕಂಠ
೧೪. ಚೈತ್ಯಾಲಯ
೧೫. ಜೀವಲಹರಿ
೧೬. ಅರಳು ಮರಳು*
೧೭. ನಮನ
೧೮. ಸಂಚಯ
೧೯. ಉತ್ತರಾಯಣ
೨೦. ಮುಗಿಲ ಮಲ್ಲಿಗೆ
೨೧. ಯಕ್ಷಯಕ್ಷಿ
೨೨. ನಾಕುತಂತಿ**
೨೩. ಮರ್ಯಾದೆ
೨೪. ಶ್ರೀಮಾತಾ
೨೫. ಇದು ನಭೋವಾಣಿ
೨೬. ಮತ್ತೆ ಶ್ರಾವಣಾ ಬಂತು
೨೭. ಚತುರೋಕ್ತಿ ಮತ್ತು ಇತರ ಕವನಗಳು.

*ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, **ಜ್ಞಾನಪೀಠ ಪ್ರಶಸ್ತಿ

## ಮರಣೋತ್ತರ ಕವನ ಸಂಕಲನಗಳು - ೬

೨೮. ಪರಾಕಿ
೨೯. ಕಾವ್ಯವೈಖರಿ
೩೦. ತಾ ಲೆಕ್ಕಣಿಕಿ ತಾ ದೌತಿ
೩೧. ಬಾಲಬೋಧೆ
೩೨. ಪ್ರತಿಬಿಂಬಗಳು
೩೩. ಶತಮಾನ

## ಆಯ್ದ ಕವನ ಸಂಕಲನಗಳು - ೯

೩೪. ಬಾ ಹತ್ತರ
೩೫. ವಿನಯ
೩೬. ಒಲವೆ ನಮ್ಮ ಬದುಕು
೩೭. ಚೈತನ್ಯದ ಪೂಜೆ
೩೮. ಶ್ರಾವಣ ಪ್ರತಿಭೆ
೩೯. ಕುಣಿಯೋಣು ಬಾ
೪೦. ಸಮರಸವೇ ಜೀವನ
೪೧. ನಾಳಿನಾ ಕನಸು
೪೨. ನೂರು ಮರ ನೂರು ಸ್ವರ ಒಂದೊಂದು ಅತಿ ಮಧುರ.

## ದ. ರಾ. ಬೇಂದ್ರೆ ಜೀವನ ಮಹಾಕಾವ್ಯ : ಅಂಬಿಕಾತನಯದತ್ತರ ಸಮಗ್ರ ಕಾವ್ಯ : "ಔದುಂಬರಗಾಥೆ"

(ವರಕವಿ ಡಾ॥ ದ.ರಾ.ಬೇಂದ್ರೆ ಸಂಶೋಧನ ಸಂಸ್ಥೆಯ ಪ್ರಕಟಣೆಗಳು ೮ ಸಂಪುಟಗಳು)

೪೩. ನಮನ ಸಂಪುಟ
೪೪. ದರ್ಶನ ಸಂಪುಟ
೪೫. ವಿಕಾಸ ಸಂಪುಟ
೪೬. ವಿನ್ಯಾಸ ಸಂಪುಟ
೪೭. ತತ್ತ್ವ ಸಂಪುಟ
೪೮. ಸಿದ್ಧಾಂತ ಸಂಪುಟ
೪೯. ಶ್ರೀಮಾತಾರವಿಂದ ಪ್ರಜ್ಞಾಪ್ರಕಾಶ
೫೦. ಸಮಗ್ರ ಸಖೀಗೀತ

## ವರಕವಿ ದ. ರಾ. ಬೇಂದ್ರೆ ಸಂಗೀತ ಅಕಾಡಮಿ ಪ್ರಕಟಣೆಗಳು-೧೦

ಹಿಂದುಸ್ಥಾನಿ ಶಾಸ್ತ್ರೀಯ ಸಂಗೀತ ಸಂಯೋಜನೆಗಳೊಂದಿಗೆ ಬೇಂದ್ರೆ ಗೇಯ ಗೀತಗಳ ಸಂಗ್ರಹಗಳು.

೫೧. ಅಂಬಿಕಾತನಯನ ಹಾಡS ಬೆಳದಿಂಗಳ ನೋಡS
೫೨. ನೋಡ್ಯಾನS ದಶಾವತಾರ ಅಂಬಿಕಾತನಯ ಹಾಡ್ಯಾನS
೫೩. ಅಂಬಿಕಾತನಯದತ್ತ ಬೇಂದ್ರೆ ಕಂಡ ಬೆನಕ
೫೪. ಅಂಬಿಕಾತನಯದತ್ತ ಬೇಂದ್ರೆ ಕಂಡ ಶ್ರಾವಣ
೫೫. ಅಂಬಿಕಾತನಯದತ್ತ ಬೇಂದ್ರೆ ಕಂಡ ಋತು ದರ್ಶನ
೫೬. ಅಂಬಿಕಾತನಯದತ್ತ ಬೇಂದ್ರೆ ಕಂಡ ಶ್ರೀಮಾತಾರವಿಂದರು
೫೭. ಅಂಬಿಕಾತನಯದತ್ತ ಬೇಂದ್ರೆ ಕಂಡ ನಾಳಿನಾ ನಾಳಿನಾ ಕನಸು
೫೮. ಅಂಬಿಕಾತನಯದತ್ತ ಬೇಂದ್ರೆ ಕಂಡ ಭಾವ ರಾಗ ಮಂಜರಿ
೫೯. ಅಂಬಿಕಾತನಯದತ್ತ ಬೇಂದ್ರೆ ಕಂಡ ನಾದ ನವನೀತ
೬೦. ಬೇಂದ್ರೆ ಸಂಗೀತ-ಸಿದ್ಧಾಂತ ಪ್ರಯೋಗ.

## ನಾಟಕಗಳು - ೧೪

೬೧. ದೆವ್ವನ ಮನೆ
೬೨. ಹಳೆಯ ಗೆಣೆಯರು
೬೩. ಸಾಯೋ ಆಟ
೬೪. ತಿರುಕರ ಪಿಡುಗು
೬೫. ಗೋಲ್
೬೬. ಉದ್ಧಾರ
೬೭. ನಗೆಯ ಹೊಗೆ
೬೮. ಮಂದೀ ಮದಿವಿ
೬೯. ಮಂದೀ ಮಕ್ಕಳು
೭೦. ಮಂದೀ ಮನಿ
೭೧. ಆ ಥರಾ ಈ ಥರಾ
೭೨. ಶೋಭನಾ
೭೩. ಜಾತ್ರೆ
೭೪. ಮಕ್ಕಳು ಆಡಗಿ ಮನೆ ಹೊಕ್ಕರೆ

## ಬೇಂದ್ರೆ ಮಾನಸ ನಾಟಕಗಳು - ೨

೭೫. ಮಿಸ್ ಫಾರ್ಚ್ಯೂನ್ - ಪ್ರೊ॥ ಕೆ. ಎಸ್. ಶರ್ಮಾ ವಿರಚಿತ
೭೬. ಕರೆ ಹೆಂಡತಿ ಆದರ ಖರೆ ಹೆಂಡತಿ - ಪ್ರೊ॥ ಎನ್. ಕೆ. ಕುಲಕರ್ಣಿ ವಿರಚಿತ

## ಹರಟೆ, ನಗೆ, ಕಥೆ - ೨

೭೭. ನಿರಾಭರಣ ಸುಂದರಿ
೭೮. ಚೀನಸದ ಬಾಳು ಬದುಕು (ಅನುವಾದಿತ ಕಥಾ ಸಂಕಲನ)

## ವಿಮರ್ಶೆ - ೧೧

೭೯. ಸಾಹಿತ್ಯ ಮತ್ತು ವಿಮರ್ಶೆ
೮೦. ಸಾಹಿತ್ಯ ಸಂಶೋಧನೆ
೮೧. ವಿಚಾರ ಮಂಜರಿ
೮೨. ಕವಿ ಲಕ್ಷ್ಮೀಶನ ಜೈಮಿನಿ ಭಾರತಕ್ಕೆ ಮುನ್ನುಡಿ
೮೩. ಮಹಾರಾಷ್ಟ್ರ ಸಾಹಿತ್ಯ
೮೪. ಕಾವ್ಯೋದ್ಯೋಗ
೮೫. ಕುಮಾರವ್ಯಾಸ (ಪುಸ್ತಿಕೆ)
೮೬. ಸಾಹಿತ್ಯದ ವಿರಾಟ್ ಸ್ವರೂಪ,
೮೭. ಕನ್ನಡ ಸಾಹಿತ್ಯದಲ್ಲಿ ನಾಲ್ಕು ನಾಯಕ ರತ್ನಗಳು
೮೮. ಸಾಹಿತ್ಯ ಯೋಗ (ಆಯ್ದ ವಿಮರ್ಶ ಲೇಖನ ಸಂಗ್ರಹ)
೮೯. ಶ್ರೀ ಅರವಿಂದ ಯೋಗ, ಆಶ್ರಮ ಮತ್ತು ತತ್ತ್ವೋಪದೇಶ.
(ಶ್ರೀ ಅರವಿಂದರನ್ನು ಕುರಿತು ಪರಿಚಯ ಪುಸ್ತಿಕೆ)

## ಸಂಪಾದನೆ - ೬

೯೦. ನನ್ನದು ಈ ಕನ್ನಡ ನಾಡು
೯೧. ಹಕ್ಕಿ ಹಾರುತಿದೆ
೯೨. ಹೊಸಗನ್ನಡ ಕ್ಯಾವ್ಯಶ್ರೀ
೯೩. ರವೀಂದ್ರ ಪ್ರಶಸ್ತಿ
೯೪. ಕನಕದಾಸ ಚತುಶ್ಶತಮಾನೋತ್ಸವ ಸಂಸ್ಮರಣ ಸಂಪುಟ
೯೫. ಚಂದ್ರಹಾಸ

## ಸಂಪಾದಿತ ಪತ್ರಿಕೆಗಳು - ೪

೯೬. ವಾಗ್ಭೂಷಣ
೯೭. ಸ್ವಧರ್ಮ
೯೮. ಜಯ ಕರ್ನಾಟಕ
೯೯. ಜೀವನ

## ಅನುವಾದ ಕನ್ನಡಕ್ಕೆ - ೬

೧೦೦. ಉಪನಿಷತ್ ರಹಸ್ಯ ಅಥವಾ ಭಾರತೀಯ ಅಧ್ಯಾತ್ಮ ಶಾಸ್ತ್ರ
ಪೀಠಿಕೆ - ರಂ. ರಾ. ದಿವಾಕರ ಹಾಗೂ ಶಂ. ಬಾ. ಜೋಶಿ
೧೦೧. ಭಾರತೀಯ ನವಜನ್ಮ
೧೦೨. ಗುರು ಗೋವಿಂದಸಿಂಗ
೧೦೩. ಕಬೀರ ವಚನಾವಲಿ
೧೦೪. ಭಗ್ನ ಮೂರ್ತಿ
೧೦೫. ನೂರೊಂದು ಕವನಗಳು

## ಮರಾಠಿಯಲ್ಲಿ - ೬

೧೦೬. ಸಂವಾದ
೧೦೭. ವಿಠಲ ಸಂಪ್ರದಾಯ
೧೦೮. ಶಾಂತಲಾ (ಕಾದಂಬರಿ)
೧೦೯. ಸಂತ ಮಹಂತ ಪೂರ್ಣಶಂಭು ವಿಠಲ (ಪ್ರಬಂಧ)
೧೧೦. ವಿಠ್ಠಲ ಪಾಂಡುರಂಗ (ಕವನ ಸಂಗ್ರಹ)
೧೧೧. ಉಮಾಳಾ (೧೧೩ ಮರಾಠಿ ಕವನಗಳ ಸಂಗ್ರಹ)

## ಇತರ - ೨

೧೧೨. ಮಾತೆಲ್ಲ ಜ್ಯೋತಿ (ಭಾಷಣ ಸಂಗ್ರಹ)

೧೧೩. ಮತ-ಧರ್ಮ ಮತ್ತು ಆಧುನಿಕ ಮಾನವ (ಭಾಷಣಗಳ ಸಂಗ್ರಹ).

## ಇಂಗ್ಲಿಷ ಕೃತಿಗಳು - ೨

114. A Theory of Immortality
115. Language-Mathematics & Truth.

## ಬೇಂದ್ರೆ ಕವನಗಳು ವಿವಿಧ ಭಾಷೆಗಳಲ್ಲಿ ಅನುವಾದ - ೮

116. Dr. D. R. Bendre - Four Strings - ಇಂಗ್ಲಿಷ ಭಾಷೆಯಲ್ಲಿ
117. ಚತುರ್ಮುಖ ಸೌಂದರ್ಯ, ಲೀಲೆ, ಕೀರ್ತಿ - ಜರ್ಮನ್ ಭಾಷೆಯಲ್ಲಿ
118. ಚಾರ್ ತಾರ್ - 'ನಾಕು ತಂತಿ'ಯ ಹಿಂದೀ ಅನುವಾದ
119. ಚಾರ ತಂತು - 'ನಾಕು ತಂತಿ'ಯ ಮರಾಠಿ ಅನುವಾದ
120. Spring Fire
121. Dreaming Tomorrow
122. Three one Act Plays
123. Sakheegeet

} Dr. K. Raghavendra Rao, Dr. Vaman Bendre, Dr. K. S. Sharma

---

: ಪುಸ್ತಕಗಳು ದೊರೆಯುವ ಸ್ಥಳ :

"ಶ್ರೀಮಾತಾ ಪ್ರಕಾಶನ", "ವಿಶ್ವಶ್ರಮ ಚೇತನ", ಗೋಕುಲ ರಸ್ತೆ,
ಬಸವೇಶ್ವರ ನಗರ, ಹುಬ್ಬಳ್ಳಿ.

ರವೀಂದ್ರ ಪುಸ್ತಕಾಲಯ,
ಚಾಮರಾಜಪೇಟೆ, ಸಾಗರ - 577 401,
ಶಿವಮೊಗ್ಗ ಜಿಲ್ಲೆ,
ದೂರವಾಣಿ : 08183-228616 (ಕ).



# ಮುಕ್ತ ಕಂಠ

"ಮುಕ್ತ ಕಂಠ" ಸಂಗ್ರಹದಲ್ಲಿ ಬಂದ
ಬರವಣಿಗೆಯಲ್ಲಿ ನಾಲ್ಕು ಬೇರೆ ಬೇರೆ ಬಗೆಯ
ಉದಾತ್ತವಾಣಿಗೆ ಕನ್ನಡಿ ಹಿಡಿಯಲಾಗಿದೆ.
ಕನ್ನಡ ನುಡಿಯಲ್ಲಿ ಯಾವ ಸೌಂದರ್ಯ ಲಹರಿಗಳನ್ನು
ಅಮೃತಾನುಭವ ನಿಮಿಷಗಳನ್ನು,
ಹೃದಯದ ಅನಿರ್ವಾಚ್ಯ ಮೌನಮೂಹರ್ತಗಳನ್ನು,
"ಮುಕ್ತ ಕಂಠ"ದಿಂದ ಬರುವ ಬಿಚ್ಚುನುಡಿಗಳನ್ನು,
ವಿವಿಧ ನಯದಲ್ಲಿ ರೂಪಿಸಿದ್ದಾಗಿದೆ.
ಇದೇ ಬಗೆಯ ಹಲಕೆಲವು
ಉಕ್ತಿಗಳೊಡನೆ ಸಾಂದರ್ಭಿಕವಾಗಿ ಬಂದ
ವಿನೋದಪ್ರಿಯ ವಿಡಂಬನೋಕ್ತಿಗಳನ್ನು
ಈ ಬಿಡಿಮುತ್ತುಗಳೊಡನೆ ಸೇರಿಸಲಾಗಿದೆ.
ರಸಕರಿಗೆ ಇಲ್ಲಿಯೂ ಚರ್ವಣಕ್ಕೆ
ನವರುಚಿಯ ಅನ್ನ ದೊರಕೀತೆಂದು
ನನ್ನ ಅಪೇಕ್ಷೆ ಇದೆ ".

- ದ. ರಾ. ಬೇಂದ್ರೆ



ಡಾ|| ದ.ರಾ.ಬೇಂದ್ರೆ ಸಂಶೋಧನ ಸಂಸ್ಥೆ,
ಹುಬ್ಬಳ್ಳಿ

Design:Ravindra